## ಇದೇ ಗ್ರಂಥಕರ್ತರಿಂದ ಪ್ರಕಟಿಸಲ್ಪಟ್ಟಿರುವ ಇತರ — ಪುಸ್ತಕಗಳು. —

| | | ರೂ. | ಅ. | ಪೈ. |
|---|---|---|---|---|
| 1. | [illegible]ಭಾರತ . . . . . | 1 | 0 | 0 |
| 2. | ರಾಜರಾಮಮೋಹನರಾವ್ ಚರಿತ್ರೆ . | 1 | 0 | 0 |
| 3. | ಈಶ್ವರಚಂದ್ರ ವಿದ್ಯಾಸಾಗರರ ಚರಿತ್ರೆ . . | 1 | 0 | 0 |
| 4. | ಹಿತೋಪದೇಶ—ಮಿತ್ರಲಾಭ . . . | 0 | 4 | 0 |
| 5. | [illegible] ಚರಿತ್ರೆ . . . . | 0 | 3 | 0 |
| 6. | ದೇಶೀಯ ಗ್ರಂಥಮಾಲೆ ಅಂಕ 1 ಮಣಿತ್ರಯ | 1 | 4 | 0 |
| 7. | ಮಹಾಭಾರತ ಸಂಗ್ರಹ 10 ಸಂಪುಟಗಳು . | 11 | 0 | 0 |
| 8. | ನೀತಿ ರಸಾಯನ 1, 2, 3ನೇ ಭಾಗಗಳು . | 0 | 12 | 0 |
| 9. | ಕೌಸಲ್ಯಾಪರಿಣಯ . . . . | 0 | 3 | 0 |
| 10. | ಜೀರ್ಣ ವಿಜಯನಗರಾದರ್ಶ . . | 0 | 6 | 0 |
| 11. | ವಾಸವದತ್ತೆ . . . . . | 0 | 2 | 0 |
| 12. | ರಂಗನಾಥ ರಾಮಾಯಣ . . . | 0 | 6 | 0 |

ಇತ್ಯಾದಿ, ಇತ್ಯಾದಿ.

# ಮುನ್ನುಡಿ

ವಾಙ್ಮಯರಂಗದಲ್ಲಿ ನೂತನವಾಗಿ ಪದಾರ್ಪಣಮಾಡಬೇಕೆಂದಿರುವ ತರುಣ ಲೇಖಕರು, ಸ್ವತಂತ್ರವಾಗಿ ಮುಂದೆ ಬರಲು ಧೈರ್ಯ ಸಾಲದೆ, ಲೇಖನ ವ್ಯವಸಾಯದಲ್ಲಿ ತಮಗಿಂತ ಹಿರಿಯರಾಗಿ ಈ ಮೊದಲೇ ವಾಚಕ ವೃಂದಕ್ಕೆ ಸುಪರಿಚಿತರಾದ ದೊಡ್ಡ ಮನುಷ್ಯರ ಊರುಗೋಲನ್ನು ಹಿಡಿದು ಇದಿರಿಗೆ ಬರಲು ಆಶಿಸುವುದು ಸಹಜವೇ ಸರಿ. ಆದರೆ ಆಸ್ಥಾನ ವಿದ್ವಾಂಸರಾಗಿಯೂ, ಕವಿಗಳಾಗಿಯೂ, ಸಾಹಿತ್ಯ ಸರಸ್ವತಿ ಮತ್ತೂ ಕಾವ್ಯ ವಿಶಾರದ ಎಂಬ ಬಿರುದುಗಳನ್ನು ಪಡೆದವರಾಗಿಯೂ ಕನ್ನಡ ದೇಶ ದಲ್ಲಿ ಕೀರ್ತಿಗೊಂಡ ಜ್ಞಾನವೃದ್ಧ ವಯೋವೃದ್ಧರಾದ ಶ್ರೀಮಾನ್ ಕುಮಾಂ ಡೂರು ರಾಮಸ್ವಾಮಯ್ಯಂಗಾರ್ಯರವರು ಕೂಡ ಈ ಊರುಗೋಲಿನ ಸಹಾಯವನ್ನು ಅಪೇಕ್ಷಿಸಿ ನನಗೆ ಬರೆದಿರುವುದು ಚೋದ್ಯವೆನ್ನಿಸದಿರಲಾ ರದು. ಆ ಸಹಾಯವನ್ನು ಅವರಿಗೆ ಕೊಡುವಷ್ಟು ಯೋಗ್ಯತೆಯಾದರೂ ನನ್ನಲ್ಲಿರುವುದೇ? ಎಂಬ ವಿಷಯದಲ್ಲಿ ನನಗೇ ಸಂದೇಹವಾಗಿದೆ. ಅದಂತಿ ರಲಿ. ರಾಮಾಯಣ, ಮಹಾಭಾರತ, ಭಾಗವತಾದಿ ನಮ್ಮ ಪುರಾಣ ಗ್ರಂಥಗಳು ಭಾರತೀಯರ ಅಮೂಲ್ಯವಾದ ನಿಧಿಗಳಾಗಿವೆ. ಅವನ್ನು ಎಷ್ಟು ಬಾರಿ ಓದಿದರೂ ಓದುವವರು ಬೇಸರಿಸುವಂತಿಲ್ಲ. ಇನ್ನು, ಅವಕ್ಕೆ ನುರಿತ ಲೇಖಕರಾದ ಇವರಂಥ ಗ್ರಂಥಕರ್ತರ ಲೇಖನಿಯ ಬಲವೂ ದೊರೆ ತರೆ ಸುವರ್ಣಕ್ಕೆ ಪರಿಮಳವು ಕೂಡಿದಂತೆ ಈ ಗ್ರಂಥಗಳು ಸಕಲ ಜನ ಸಮಾದರಣೀಯಗಳಾಗುವುದರಲ್ಲಿ ಸಂದೇಹವೇ ಇಲ್ಲವು.

ಇಂತು ಸಕಲ ಸಜ್ಜನ ವಿಧೇಯ,

ವೇಪೇರಿ, ಮದ್ರಾಸು.
ತಾ. ೧೦ನೇ ಜುಲೈ '೨೫

**ಬಿ. ರಾಮರಾವ್.**



# ಉಪೋದ್ಘಾತ

ನಮ್ಮ ಆರ್ಯರ ಮತಗ್ರಂಥಗಳಲ್ಲಿ ವೇದ ಶಾಸ್ತ್ರ ಪುರಾಣಗಳಿಗಿಂತ ಭಾರತ ರಾಮಾಯಣಗಳೆಂಬ ಇತಿಹಾಸಗಳೇ ಸರ್ವಜನಾದರಣೀಯಗಳಾಗಿ ಆಬಾಲವೃದ್ಧರಿಂದಲೂ ಪ್ರತಿ ಮನೆಗಳಲ್ಲಿಯೂ ಪಾರಾಯಣಮಾಡಲ್ಪಡುತ್ತಿವೆ. ಈಚೀಚೆಗೆ ಜನರು ಮತಧರ್ಮಗಳಲ್ಲಿ ವಿಶ್ವಾಸ ಬಿಟ್ಟು ಕೆಡುತ್ತಿರುವುದನ್ನು ನೋಡಿ ಇಲ್ಲಿಯ ಮಹನೀಯರು ದೇಶೀಯ ಪಾಠಶಾಲೆಗಳನ್ನು ಸ್ಥಾಪಿಸಿ ಆರ್ಯಧರ್ಮಗಳನ್ನು ಬೋಧಿಸತೊಡಗಿರುವುದು ಬಹುಮಟ್ಟಿಗೆ ಸ್ತುತ್ಯವಾಗಿದೆ. ಇವರ ಸಾಹಸಪ್ರಯತ್ನಗಳು ಸಫಲವಾಗಲೆಂದು ಬಯಸುತ್ತೇನೆ.

ಸಣ್ಣ ಮಕ್ಕಳಿಗೆ ಓದಲು ಅನುಕೂಲಿಸತಕ್ಕ ಕೆಲವು ಪುಸ್ತಕಗಳನ್ನು ಬರೆಯತೊಡಗಿ ಬಾಲರಾಮಾಯಣವನ್ನು ಸುಲಭ ಶೈಲಿಯಲ್ಲಿ ಬರೆದೆನು. ಇದು ಬಹು ಸ್ವಲ್ಪ ಕಾಲದಲ್ಲಿಯೇ ಕನ್ನಡಿಗರಲ್ಲಿ ಸಮಾದರಣೀಯವಾಗಿ ಧಾರಾಳವಾಗಿ ವೆಚ್ಚವಾಗುತ್ತಾ ಇರುವುದು ನನಗೆ ತುಂಬ ಪ್ರೋತ್ಸಾಹಕೊಟ್ಟುದರಿಂದ ಅದರಂತೆಯೇ ಭಾರತ ಭಾಗವತಗಳನ್ನೂ ಲಲಿತವಾದ ಭಾಷೆಯಿಂದ ಬರೆದು ನನ್ನ ಪ್ರಿಯ ಮಿತ್ರರಾದ ಶ್ರೀಯುತ ಕೆ. ಎಮ್. ದಾಸಪ್ರಭುಗಳಿಗೆ ಕಳುಹಿದೆನು. ಇವರು ಪ್ರಕಟನೆಯ ಭಾರವನ್ನು ವಹಿಸಿಕೊಂಡು ಉತ್ತಮ ತರದಿಂದ ಮುದ್ರಿಸಿ ಪ್ರಕಾಶಪಡಿಸಿದ್ದಕ್ಕಾಗಿ ಇವರಿಗೆ ತುಂಬಾ ಕೃತಜ್ಞನಾಗಿದ್ದೇನೆ.

ಮೇಲೆ ಹೇಳಿದ ರಾಮಾಯಣ, ಭಾರತ, ಭಾಗವತ ಮೂರು ಗ್ರಂಥಗಳನ್ನೂ ಒಟ್ಟಿಗೆ ಸೇರಿಸಿ 'ಮಣಿತ್ರಯ'ವೆಂಬ ಹೆಸರಿಟ್ಟು ಬೈಂಡು ಕಟ್ಟಿಸಿರುವುದರಿಂದ ಸರಸ್ವತೀ ಭಂಡಾರಗಳಿಗೂ, ಮನೆಮನೆಯ ಪುಸ್ತಕ ಗೃಹಗಳಿಗೂ ಅನುಕೂಲಿಸಬಹುದೆಂದು ನಂಬುತ್ತೇನೆ. ಪ್ರತ್ಯೇಕ ಪುಸ್ತಕಗಳನ್ನು ಓದತಕ್ಕವರಿಗೆ ಅನುಕೂಲಿಸುವಂತೆ ಬೇರೆ ಬೇರೆ ಸಣ್ಣ ಪ್ರತಿಗಳೂ ಸುಲಭವಾಗಿ ಸಿಕ್ಕುವಂತೆ ಏರ್ಪಡಿಸಿದೆ.

ಸಾಕಾದಷ್ಟು ಚಿತ್ರಗಳನ್ನು ಉಪಯೋಗಿಸಿ ಪುಸ್ತಕದ ಅಂದವನ್ನು ಮತ್ತಷ್ಟು ಹೆಚ್ಚಿಸಬೇಕೆಂಬ ಅಪೇಕ್ಷೆಯಿದ್ದರೂ ಈ ಪ್ರಥಮ ಮುದ್ರಣದಲ್ಲಿ ಸಾಧ್ಯವಿಲ್ಲದೆ ಹೋದ್ದಕ್ಕಾಗಿ ಚಿಂತಿಸುತ್ತೇನೆ. ತಕ್ಕ ಆಶ್ರಯ ದೊರೆತರೆ ಮುಂದೆ ಈ ಪ್ರಯತ್ನವನ್ನು ಕಾರ್ಯತಃ ತೋರಿಸಲಾಗುವುದು. ಪ್ರಿಯ ವಾಚಕರು ಈ ಗ್ರಂಥದಲ್ಲಿ ಇರತಕ್ಕ ಗುಣವನ್ನು ಪರಿಗ್ರಹಿಸಿ ಭ್ರಮಪ್ರಮಾದಗಳಿಂದ ತೋರಬರುವ ದೋಷಗಳನ್ನು ಮನ್ನಿಸಬೇಕೆಂದು ಪ್ರಾರ್ಥನೆ.

ಇಂತು ಕನ್ನಡಿಗರ ಹಿತಚಿಂತಕ,

ಕುಮಾಂಡೂರು ರಾಮಸ್ವಾಮ್ಯಯ್ಯಂಗಾರ್.
ಆಸ್ಥಾನ ವಿದ್ವಾನ್
ಸಾಹಿತ್ಯ ಸರಸ್ವತೀ ಮತ್ತು ಕಾವ್ಯವಿಶಾರದ.

ಮಾಗಡಿ,
ವರಮಹಾಲಕ್ಷ್ಮೀವ್ರತಶುಭ ದಿನ
ಕ್ರೋಧನ ನಾಮ ಸಂವತ್ಸರ.



# ಅನುಕ್ರಮಣಿಕೆ

## —•• ಭಾರತವೀರರ ಕಥೆಗಳು. ••—





## ತಪ್ಪೊಪ್ಪುಗಳ ವಿವರಣೆ.



| ಪಂಕ್ತಿ | ತಪ್ಪು | ಒಪ್ಪು |
|---|---|---|
| 1 | ಗಂಗಾನದೀ | ಗಂಗಾನದಿಗೆ ಯಮುನೆ ಎಂಬುದು ಉಪನದಿ ಅದರ |
| 9 | ಧೃಡಾಂಗ | ದೃಢಾಂಗ |
| 18 | ಕಾದ | ಕಾದಿ |
| 23 | ವೇಶ | ವೇಷ |
| 24 | ವೇಶ | ವೇಷ |
| 10 | ಖಾಂಡವನ | ಖಾಂಡವವನ |
| 9 | ಒಬ್ಬೊಬ್ಬರು | ಒಬ್ಬೊಬ್ಬರನ್ನು |
| 16 | ಹಲಿಗೆಯಲ್ಲಿ | ಹಲಗೆಯಲ್ಲ |
| 21 | ಎಂಥಹ | ಎಂತಹ |
| ಕೊನೆ | ಮಾಯಗಾರೆ | ಮಾಯಗಾತಿ |
| 12 | ಯುದುರು | ಇದಿರು |
| 6 | ದುರಅಹಂಕಾರ | ದುರಹಂಕಾರ |
| 20 | ದ್ವೇಶ | ದ್ವೇಷ |
| 9 | ಜಾಣೇ | ಜಾಣ್ಮೆ |
| 12 | ಇಂದ್ರ | ಇಂದ್ರ ಮೊದಲಾದ |
| 26 | ಹೊರಟುಹೋದನು- | ಅಷ್ಟರಲ್ಲಿ ದೇವಲೋಕದಿಂದ ಅರ್ಜುನನೂ ಒಂದು ಸೇರಿದನು (ಇದನ್ನು ಸೇರಿಸಿರಿ) |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 49 | 14 | ಆತ್ರ | ಆರ್ತ |
| 55 | 2 | ದೇವರನು | ದೇವರನ್ನು |
| 56 | 10 | ಮಾಡಿದ್ಧರಿ | ಮಾಡಿದ್ದರೂ |
| 59 | 8 | ಅವಳು | ರಾಣಿಯು |
| ,, | 25 | ಮತ್ಸ | ಮತ್ಸ್ಯ |
| 61 | 21 | ಬೆವರು | ಬೆವತು |
| 62 | 14 | ವೇಶ | ವೇಷ |
| 63 | 24 | ಆದವೀರಸಿಗೆ ಎುರಿಸಿ | ಆ ವೀರನಿಗೆ ಎದುರಿಸಿ |
| 64 | ಕೊನೆ | ಭ್ರಹನ್ನಳೆ | ಬೃಹನ್ನಳೆ |
| 71 | 4 | ಪ್ರಸ್ಥಾಪ | ಪ್ರಸ್ತಾಪ |
| 83 | 24 | ಮನುಷ | ಮನುಷ್ಯ |
| 86 | 2 | ಧೈರ್ಯ | ದೈನ್ಯ |
| iv | 19 | ಪ್ರಜ್ಞಾ | ಪ್ರಜ್ಞಾ |
| viii | 7 | ಕಂತುಗಳಿಂದ | ಕಂಕುಳಿಂದ |
| ix | 19 | ಬೀಷ್ಮ | ಭೀಷ್ಮ |
| xii | 12 | ನಿಕುರ್ಯಾತ್ಃ | ನಕುರ್ಯಾತ್ಕಃ |
| xiii | 6 | ಸುರಿಸುತ್ತಾ | ಸ್ಫುರಿಸುತ್ತಾ |
| xiv | 5 | ಬಲಿಷ್ಮ | ಬಲಿಷ್ಟ |



|| ಶ್ರೀ ||



# ಬಾಲಭಾರತ

## ಗಣೇಶನ ಪಾಠ

ಚಿಕ್ಕ ಮಕ್ಕಳಿರಾ! ನಿಮಗೇನಾದರೂ ಒಂದು ಕಥೆ ಕೇಳಬೇಕೆಂದು ಇಷ್ಟ ಉಂಟೋ? ಮಕ್ಕಳಿಗೆ ತಿಂಡಿ, ನಿದ್ದೆ ಇವುಗಳ ಜತೆಗೆ ಬೇಕಾದ ಆಟಪಾಟಗಳು ಇಷ್ಟೇ ಕೆಲಸ. ದೊಡ್ಡವರ ಹಾಗೆ ಕಷ್ಟಪಡಬೇಕಾಗಿಲ್ಲ. ಸಂಸಾರ ಚಿಂತೆ ಮೊದಲೇ ಇಲ್ಲ. ಯಾವ ಯೋಚನೆಯೂ ಇಲ್ಲದೆ ಸುಖವಾಗಿ ಕಾಲಕಳೆಯಬಹುದು. ಮನುಷ್ಯ ಜೀವಮಾನದಲ್ಲಿ ಇದರಷ್ಟು ಅನುಕೂಲವಾದ ಕಾಲವು ಮತ್ತೊಂದೂ ಇಲ್ಲ. ಈ ವಯಸ್ಸಿನಲ್ಲಿ ಕಲಿತ ವಿದ್ಯೆಗಳು ಸಾಯುವ ತನಕ ಮರೆಯುವುದಿಲ್ಲ. ನಿಮ್ಮನ್ನು ಹೆತ್ತವರು ಪ್ರೀತಿಯಿಂದ ಬೆಳೆಸುವರು, ಆರೋಗ್ಯ ಹೆಚ್ಚಿ ಮೈಬೆಳೆಯುವುದು, ಕಂಡದ್ದೂ, ಕೇಳಿದ್ದೂ, ಓದಿದ್ದೂ ಮನಸ್ಸಿಗೆ ಚೆನ್ನಾಗಿ ಹತ್ತುವುವು. ಆದಕಾರಣ ನೀವು ದಿನಕ್ಕೆ ನಾಲ್ಕು ಗಳಿಗೆ ಹೊತ್ತಾದರೂ ನಮ್ಮ ಪುರಾಣ ಕಥೆಗಳನ್ನು ಕೇಳಿ ಜ್ಞಾಪಕದಲ್ಲಿಟ್ಟುಕೊಂಡರೆ ನಿಮಗೆ ಒಳ್ಳೆಯ ನಡತೆಗಳು ರೂಢಿಯಲ್ಲಿ ತರಲು ಅನುಕೂಲವಾಗುವುವು. ಕೆಟ್ಟವರಿಗೆ ಸಂಭವಿಸುವ ಕಷ್ಟಗಳೂ ಉತ್ತಮರಿಗೆ

ಉಂಟಾಗುವ ಫಲಗಳೂ ಗೊತ್ತಾಗುವವು. ಆದುದರಿಂದ ಮನಸ್ಸಿಟ್ಟು ಆಗಾಗ್ಗೆ ಕಥೆಗಳನ್ನು ಓದುವ ಅಭ್ಯಾಸ ರೂಢಿಮಾಡಿರಿ.

ನಮ್ಮ ಹಿಂದೂ ಶಾಸ್ತ್ರಗಳಲ್ಲಿ ಮಹಾಭಾರತದಷ್ಟು ದೊಡ್ಡ ಪುಸ್ತಕ ಮತ್ತೆ ಯಾವುದೂ ಇಲ್ಲ. ನಮ್ಮಲ್ಲಿ ಇರುವ ನಾಲ್ಕು ವೇದಗಳ ಜತೆಗೆ ಇದನ್ನು ಸೇರಿಸಿ ಐದನೆಯ ವೇದವೆಂದು ಹೆಸರಿಟ್ಟಿರುವರು. ಇದರಲ್ಲಿ ಇಲ್ಲದ ನೀತಿಯಾಗಲಿ, ಧರ್ಮವಾಗಲಿ, ಕಥೆಗಳಾಗಲಿ ಮತ್ತೆಲ್ಲಿಯೂ ಸಿಕ್ಕುವುದಿಲ್ಲ. ಜನರು ಮನೆ ಮನೆಗಳಲ್ಲಿಯೂ ಈ ಪುಸ್ತಕವನ್ನು ಓದಿಸಿ ಕೇಳಿ ಸಂತೋಷ ಪಡುತ್ತಿರುವರು. ನಿಮಗೂ ಇದರ ರುಚಿಯನ್ನು ಸ್ವಲ್ಪ ಮಟ್ಟಿಗೆ ತೋರಿಸಿ ಕೊಡಬೇಕೆಂದು ನನಗೆ ಆಶೆ. ನೀವು ಮನಸ್ಸಿಟ್ಟು ಓದುವದಾದರೆ ನಿಮಗೆ ತಿಳಿಯುವ ಹಾಗೆ ಚಿಕ್ಕ ಚಿಕ್ಕ ಮಾತುಗಳಿಂದ ಈ ಕಥೆಯನ್ನು ಹೇಳುವೆನು. ಬೇಸರಗೊಳ್ಳದೆ ದಿನಕ್ಕೊಂದೊಂದು ಪಾಠವಾದರೂ ಓದಿ ಕಥೆಯ ಸಾರವನ್ನು ತಿಳಿದುಕೊಂಡು ಉತ್ತಮವಾದ ನಡತೆಗಳನ್ನು ಕಲಿತುಕೊಳ್ಳಿರಿ. ಕೆಟ್ಟ ನಡತೆಗಳನ್ನು ಬಿಟ್ಟುಬಿಡಿರಿ. ಭಾರತ ಕಥೆಯ ಮುಖ್ಯ ಸಾರಾಂಶ ಹೇಳಿ ಬಿಡುತ್ತೇನೆ.

ಅಣ್ಣತಮ್ಮಂದಿರ ಮಕ್ಕಳಾದ ದೊರೆಗಳಲ್ಲಿ ಎರಡು ಪಂಗಡದವರು ಒಂದೇ ಮನೆಯಲ್ಲಿ ಹುಟ್ಟಿ ಬೆಳೆದವರು. ಅವರಲ್ಲಿ **ಪಾಂಡವರು** ಉತ್ತಮರು. **ಕೌರವರು** ಅಹಂಕಾರಿಗಳು ಮತ್ತು ಮೂರ್ಖರು. ದಾಯಾದಿಗಳು ತಮ್ಮ ಆಸ್ತಿಯನ್ನು ಸರಿಯಾಗಿ ಪಾಲುಮಾಡಿಕೊಂಡು ಅನುಭವಿಸುವುದು ಲೋಕಧರ್ಮ. **ಕೌರವ**ರಿಗೆ ಇದು ಸರಿಬೀಳಲಿಲ್ಲ. ಸೊತ್ತನ್ನೆಲ್ಲಾ ತಾವೇ ಆಕ್ರಮಿಸಿಕೊಂಡು ತಮ್ಮ ಜ್ಞಾತಿಗಳಾದ ಪಾಂಡವರನ್ನು ಕಾಡಿಗೆ ಅಟ್ಟಬಿಡಬೇಕೆಂದು ಆಲೋಚನೆ ಮಾಡಿದರು. ಅವರಿಗೆ ಕೊಡಬಾರದ ಕಷ್ಟಗಳನ್ನು ಕೊಟ್ಟರು, ನೀರಲ್ಲಿ ತಳ್ಳಿಸಿದರು, ವಿಷ ಇಡಿಸಿದರು, ಅವರಿದ್ದ ಮನೆಗೆ ಬೆಂಕಿ ಹತ್ತಿಸಿದರು. ಅವರ ಸಂಗಡ ಜೂಜಾಡಿ ಮೋಸದಿಂದ ಸೋಲಿಸಿ ಅವರ ಹೆಂಗಸನ್ನು ಅವಮಾನಪಡಿಸಿದರು. ಅಲ್ಲಿಗೂ ಅವರಿಗೆ ಸಮಾಧಾನವಾಗಲಿಲ್ಲ. ಕಡೆಗೆ ಬಹುಕಾಲ ಕಾಡಿಗೆ ಅಟ್ಟಿದರು. ಅಲ್ಲಿಯೂ ಅವರಿಗೆ ಉಳಿ

ಯುವ ಬಾಳಿಲ್ಲದೆ ಇರುವ ಹಾಗೆ ಹಲವು ತೊಂದರೆಗಳನ್ನು ಕೊಟ್ಟರು. ಆದರೂ ಸರ್ವಸಾಕ್ಷಿಯಾದ ದೇವರ ದಯೆಯಿಂದಲೂ ಆ **ಪಾಂಡವರ** ಸತ್ಯ ಧರ್ಮದಿಂದಲೂ ಅವರಿಗೆ ಬಂದಿದ್ದ ಕಷ್ಟಗಳೆಲ್ಲಾ ಪರಿಹಾರವಾದುವು. ಕೊನೆಗೆ ಎರಡು ತಂಡದವರಿಗೂ ಬಲವಾದ ಯುದ್ಧವು ನಡೆಯಿತು. ಅದರಲ್ಲಿ ದುಷ್ಟರಾದ ಕೌರವರೆಲ್ಲಾ ಹಾಳಾಗಿ ಹೋದರು. ಪಾಂಡವರಿಗೆ ಜಯವು ಸಿಕ್ಕಿತು. ಅವರಲ್ಲಿ ಹಿರಿಯವನಾದ ಧರ್ಮರಾಯನು ಪಟ್ಟವನ್ನು ಕಟ್ಟಿಕೊಂಡು ತನ್ನ ಹೆಸರಿಗೆ ತಕ್ಕಂತೆ ಧರ್ಮದಿಂದ ಪ್ರಜೆಗಳನ್ನು ಆಳುತ್ತಾ ಬಂದನು. ಇದರಿಂದ ಉತ್ತಮರಿಗೆ ಎಂದಿಗೂ ಹಾನಿ ಬರುವುದಿಲ್ಲವೆಂದು ಗೊತ್ತಾಯಿತು. ಇಷ್ಟೇ ಈ ಕಥೆಯ ಸಾರಾಂಶ.

---

## ಒಂದನೆಯ ಪಾಠ.

ಉತ್ತರ ದೇಶದಲ್ಲಿ **ಗಂಗೆ**ಯೆಂಬ ದೊಡ್ಡ ಹೊಳೆ ಹರಿಯುತ್ತಿರುವುದು. ಅದರ ದಡದಲ್ಲಿ **ಕಾಶಿ ಹರಿದ್ವಾರ** ಮುಂತಾದ ಪುಣ್ಯ ಸ್ಥಳಗಳು ಬಹಳವಾಗಿರುವುವು. ಗಂಗೆಯ ನೀರು ಶ್ರೇಷ್ಠವಾದುದು. ರೋಗದ ಬೀಜಗಳು ಆ ನೀರಲ್ಲಿ ಸೇರುವುದಿಲ್ಲ. ಅದರಲ್ಲಿ ಸ್ನಾನಮಾಡುವವರು, ಅದನ್ನು ಕುಡಿಯುವವರು, ಅದರ ಹತ್ತಿರ ವಾಸಮಾಡುವವರು, ಬುದ್ಧಿವಂತರಾಗಿಯೂ, ಬಲವಾದ ಮೈಯುಳ್ಳವರಾಗಿಯೂ, ಹಣಗಾರರಾಗಿಯೂ ಇರುವರು. ಹಿಂದೂ ಜನರು ಒಂದು ಸಾರಿಯಾದರೂ ಆ ನದಿಯನ್ನು ನೋಡಿ, ಸ್ನಾನಮಾಡಿಕೊಂಡು ಬಂದರೆ ಜನ್ಮವು ಸಾರ್ಥಕವಾಗುವುದು. ಸಾಯುವವರ ಬಾಯಲ್ಲಿ ಒಂದು ಉದ್ಧರಣೆ ಗಂಗೆಯ ತೀರ್ಥವನ್ನು ಕುಡಿಸಿದರೆ ಅವರು ಮಾಡಿದ ಪಾಪವೆಲ್ಲವೂ ಪರಿಹಾರವಾಗಿ ಸದ್ಗತಿ ಉಂಟಾಗುವುದು. ತೀರ್ಥಯಾತ್ರೆಗಳಲ್ಲಿ **ಕಾಶೀಯಾತ್ರೆ** ಶ್ರೇಷ್ಠವಾದುದು. ಜನರು ಮದುವೆಯ ಕಾಲದಲ್ಲಿ ಕಾಶೀಯಾತ್ರೆ ಹೊರಡುವ ಸಂಪ್ರದಾಯವನ್ನು ಬ್ರಾಹ್ಮಣರಲ್ಲಿ ನೀವೂ ನೋಡಿರಬಹುದು.

ಆ ಗಂಗಾನದೀ ತೀರದಲ್ಲಿ ಪೂರ್ವಕಾಲದಲ್ಲಿ ಪ್ರಸಿದ್ಧವಾದ ಪಟ್ಟಣಗಳು ಅನೇಕವಾಗಿ ಇದ್ದುವು. ಅವುಗಳಲ್ಲಿ **ಹಸ್ತಿನಾಪುರ**ವೆಂಬುದು ಮುಖ್ಯವಾದದ್ದು. ಈಗಲೂ ಆ ಪಟ್ಟಣವು **ದೆಹಲಿ** (ಡಿಲ್ಲಿ) ಎಂಬ ಹೆಸರಿನಿಂದ ಪ್ರಸಿದ್ಧವಾಗಿ ನಮ್ಮ ಹಿಂದೂಸ್ಥಾನಕ್ಕೆ ರಾಜಧಾನಿ ಎನಿಸಿಕೊಂಡಿದೆ. ಘೋರವಾದ ಕುರುಕ್ಷೇತ್ರ ಯುದ್ಧವು ನಡೆದುದೂ, ಹಿಂದೂ ಮತ್ತು ಮುಹಮ್ಮದೀಯರ ಭಯಂಕರವಾದ ಹಲವು ಯುದ್ಧಗಳು ನಡೆದುದೂ ಈ ಪಟ್ಟಣದ ಹತ್ತಿರ ಇರುವ ದೊಡ್ಡ ಮೈದಾನದಲ್ಲಿಯೇ. ಪ್ರಸಿದ್ಧವಾದ ಹಿಂದೂ ರಾಜರುಗಳೂ, ಮುಹಮ್ಮದೀಯ ಚಕ್ರವರ್ತಿಗಳೂ, ಬಹುಕಾಲ ರಾಜ್ಯವಾಳುತ್ತಾ ಬಂದುದು ಈ ಮಹಾನಗರದಲ್ಲಿಯೇ. ಈ ಪಟ್ಟಣದ ಸೊಬಗನ್ನೂ ಅಲ್ಲಿರುವ ಅರಮನೆಗಳ ಅಂದಚಂದಗಳನ್ನೂ ಕಣ್ಣಾರೆ ನೋಡಿ ತಿಳಿಯಬೇಕೇ ಹೊರತು, ಕಿವಿಯಿಂದ ಕೇಳಿ ಗ್ರಹಿಸುವುದು ಕಷ್ಟ. ನೀವು ದೊಡ್ಡವರಾದ ಮೇಲೆ ಅನುಕೂಲವಾಗಿದ್ದರೆ ಹೋಗಿ ನೋಡಬಹುದು.

ಐದು ಸಾವಿರ ವರ್ಷಗಳ ಮುಂಚೆ ಈ ಪಟ್ಟಣದಲ್ಲಿ ಒಬ್ಬ ಮಹಾರಾಜನು ಆಳುತ್ತಿದ್ದನು. ಅವನಿಗೆ **ಭರತ**ನೆಂದು ಹೆಸರು. ಅವನ ವಂಶದಲ್ಲಿ ಹುಟ್ಟಿದವರೇ ಈ **ಕೌರವ-ಪಾಂಡವರು. ಭರತನು** ಚಕ್ರವರ್ತಿಯಾಗಿ ಹಿಂದುಸ್ಥಾನವನ್ನೆಲ್ಲಾ ಆಳಿದುದರಿಂದ ಈ ದೇಶಕ್ಕೆ **ಭರತವರ್ಷ**ವೆಂತಲೂ, **ಭರತಖಂಡ**ವೆಂತಲೂ ಹೆಸರು ಬಂತು. ಇಲ್ಲಿಯ ನಿವಾಸಿಗಳಿಗೆ **ಭಾರತೀಯ**ರೆಂಬ ಹೆಸರು ಇದರಿಂದಲೇ ಉಂಟಾಯಿತು. ಇವನು ಚಂದ್ರವಂಶಕ್ಕೆ ಸೇರಿದವನೆಂದು ಹೇಳುತ್ತಾರೆ. ಈ ವಂಶದಲ್ಲಿ **ಶಂತನು**ವೆಂಬುವನು ಪ್ರಸಿದ್ಧನಾದ ದೊರೆ. ಆತನಿಗೆ **ದೇವವ್ರತ, ಚಿತ್ರಾಂಗದ, ವಿಚಿತ್ರವೀರ್ಯ** ಎಂಬ ಮೂವರು ಮಕ್ಕಳು ಹುಟ್ಟಿದರು. ಇವರಲ್ಲಿ ಹಿರಿಯವನಾದ **ದೇವವ್ರತನು** ಸತ್ಯವಂತರಲ್ಲಿ ಹೆಸರುಗೊಂಡವನು. ತಂದೆಯು ಒಬ್ಬ ಹೆಂಗಸನ್ನು ಪ್ರೀತಿಸಿ ಮದುವೆಮಾಡಿಕೊಳ್ಳಲಿಕ್ಕೆ ಯತ್ನಿಸಲು ಆ ಹುಡುಗಿಯ ತಂದೆಯು ಮುಂದೆ ಪಟ್ಟಕ್ಕೆ **ದೇವವ್ರತನು** ಹಕ್ಕುದಾರನಾದುದರಿಂದ ರಾಜನಿಗೆ ತನ್ನ ಮಗಳನ್ನು ಕೊಡುವುದಿಲ್ಲವೆಂದು ಹೇಳಿಬಿಟ್ಟನು.

ಆಗ **ದೇವವ್ರತನು** ಅವನನ್ನು ನೋಡಿ "ಅಯ್ಯಾ ನಾನು ಬದುಕಿರುವ ತನಕ ಮದುವೆಮಾಡಿಕೊಳ್ಳದೆ ಬ್ರಹ್ಮಚರ್ಯದಿಂದಲೇ ಇರುವೆನು. ರಾಜ್ಯದ ಪಟ್ಟವನ್ನೂ ನಾನು ಒಲ್ಲೆನು. ಈ ಮಾತಿಗೆ ತಪ್ಪುವುದಿಲ್ಲ. ನಿನ್ನ ಮಗ ಳನ್ನು ನಮ್ಮ ಅಪ್ಪನಿಗೆ ಕೊಟ್ಟು ಮದುವೆಮಾಡು" ಎಂದು ಪ್ರಮಾಣಮಾಡಿ ಕೊಟ್ಟನು. ಆಹಾ! ಎಂತಹ ಘೋರವಾದ ಪ್ರತಿಜ್ಞೆಯು. ಇದನ್ನು ಪಾಲಿ ಸುವುದು ಸಾಧ್ಯವೇ! ಆದರೂ ಸತ್ಯವಾದಿಯಾದ ಆತನು ಎಷ್ಟೆಷ್ಟೋ ಅಡ್ಡಿ ಗಳು ಬಂದರೂ ತಾನು ಆಡಿದ ಮಾತುಗಳನ್ನು ತಪ್ಪಲಿಲ್ಲ. ಇದಕ್ಕಾಗಿ ತನ್ನ ವಿದ್ಯಾ ಗುರುವಿನೊಂದಿಗೆ ಯುದ್ಧಮಾಡಿ ಅವನನ್ನು ಸೋಲಿಸಿಬಿಟ್ಟನು. ಅವನ ಬಲವೂ ಸ್ವಲ್ಪವೂ ಕುಗ್ಗದೆ ಸಾಯುವತನಕ ಧೃಡಾಂಗನಾಗಿಯೇ ಇದ್ದನು. ಅವನಿಗೆ **ಭೀಷ್ಮ**ನೆಂಬ ಹೆಸರು ಪ್ರಸಿದ್ಧವಾಗಿದೆ. ಅವನಂತೆ ಬಲ ಶಾಲಿಯೂ, ನ್ಯಾಯಪರನೂ, ದೈವಭಕ್ತನೂ, ಕಳಂಕವಿಲ್ಲದವನೂ ಸಿಕ್ಕು ವುದು ಕಷ್ಟ. ನೀವೆಲ್ಲರೂ ಆ ಭೀಷ್ಮನಂತೆಯೇ ನೀತಿಪರರಾಗಿ ವರ್ತಿಸು ವುದಕ್ಕೆ ಸರ್ವಪ್ರಯತ್ನಗಳನ್ನೂ ಮಾಡಿದರೆ ಈ ಲೋಕದಲ್ಲಿ ಕೀರ್ತಿಯನ್ನೂ ಸೌಖ್ಯವನ್ನೂ ಪಡೆಯುವಿರಿ.

**ಭೀಷ್ಮನು** ಈ ಪ್ರತಿಜ್ಞೆಯನ್ನು ಮಾಡಿದ ಮೇಲೆ ಅವನು ಬಯಸಿದ್ದ **ಸತ್ಯವತಿ**ಯನ್ನು **ಶಂತನುರಾಯನು** ಮದುವೆಯಾಗಿ ಕೆಲವುಕಾಲ ಸುಖ ವಾಗಿದ್ದು ಕಾಲವಾದನು. ಬಳಿಕ ಸತ್ಯವತಿಯ ಮಗನಾದ **ಚಿತ್ರಾಂಗದನು** ದೊರೆಯಾಗಿದ್ದು ಒಂದು ಯುದ್ಧದಲ್ಲಿ ಕಾದ ಸತ್ತನು. ಅವನ ತಮ್ಮ **ವಿಚಿತ್ರ ವೀರ್ಯನು** ಪಟ್ಟಕ್ಕೆ ಬಂದನು. ಭೀಷ್ಮನು ಅವನಿಗೆ **ಕಾಶೀರಾಜನ** ಹೆಣ್ಣು ಮಕ್ಕಳಿಬ್ಬರನ್ನು ತಂದು ಮದುವೆಮಾಡಿದನು. ಆ ರಾಜನೂ ಮಕ್ಕಳಿಲ್ಲದೆ ಸತ್ತನು. ಆ ಗಿನ ಸಂಪ್ರದಾಯದಂತೆ **ಭೀಷ್ಮನು** ಆ ಹೆಂಗಸನ್ನೇ ಇಟ್ಟು ಕೊಂಡು ಅವಳಿಂದ ಮಕ್ಕಳನ್ನು ಪಡೆಯಬೇಕೆಂದು ಬಲತಾಯಿಯೇ ಅಪ್ಪಣೆ ಕೊಟ್ಟಳು. **ಭೀಷ್ಮನು** ಮಾತಿಗೆ ತಪ್ಪತಕ್ಕವನಲ್ಲ. ತಾನು ಆಡಿದ ಮಾತಿ ನಂತೆ ಸ್ತ್ರೀಯರನ್ನು ಮುಟ್ಟುವುದೇ ಇಲ್ಲವೆಂದು ಹಟಹಿಡಿದುಬಿಟ್ಟನು. ಆಗ **ವ್ಯಾಸಮಹಾಮುನಿಯ** ಅನುಗ್ರಹದಿಂದ ಆ ರಾಣಿಯು ತನ್ನ

ಸೊಸೆಯರಿಗೆ ಮಕ್ಕಳುಂಟಾಗಬೇಕೆಂದು ಬೇಡಿಕೊಂಡಳು. ಆ ಮಹಾತ್ಮನು ಅವರಲ್ಲಿ ಕರುಣಿಸಿ ಮಕ್ಕಳನ್ನು ಕೊಟ್ಟನು. ಒಬ್ಬ ರಾಣಿಗೆ ಹುಟ್ಟು ಕುರುಡನಾದ ಮಗನು ಹುಟ್ಟಿದನು. ಅವನೇ **ಧೃತರಾಷ್ಟ್ರನು.** ಅವನ ಮಕ್ಕಳು **ಕೌರವರು.** ಎರಡನೆಯ ರಾಣಿಗೆ **ಪಾಂಡು** ಎಂಬ ಮಗನು ಹುಟ್ಟಿದನು. ಇವನು ರೋಗಿಷ್ಠನು. ಇವನ ಮಕ್ಕಳೇ ಪಾಂಡವರು. **ಸತ್ಯವತಿಯು** ಮತ್ತೊಬ್ಬ ಮಗನನ್ನು ಕರುಣಿಸಬೇಕೆಂದು ಪುನಃ ಮುನಿಯನ್ನು ಬೇಡಿದಳು. ಆ ರಾಣಿಯರು ಋಷಿಯ ಘೋರ ರೂಪವನ್ನು ನೋಡಿ ಆತನ ಬಳಿಗೆ ಹೋಗಲಿಕ್ಕೆ ಹೆದರಿ ಒಬ್ಬ ದಾಸಿಯನ್ನು ಶೃಂಗರಿಸಿ ಕಳುಹಿಸಿದರು. ಅವಳಿಗೆ ಆತನು ಒಬ್ಬ ಮಗನನ್ನು ಅನುಗ್ರಹಿಸಿದನು. ಇವನಿಗೆ **ವಿದುರ**ನೆಂದು ಹೆಸರು. ಇವನು ದಾಸೀಪುತ್ರನಾದರೂ ತುಂಬಾ ಬುದ್ಧಿವಂತನು, ನ್ಯಾಯವಾದಿ, ನೀತಿಪರನು, ಪಾಪಕ್ಕೆ ಅಂಜತಕ್ಕವನು, ಒಳ್ಳೆಯ ನಡತೆಯುಳ್ಳವನು. ಯಾವ ಜಾತಿಯಲ್ಲಿ ಹುಟ್ಟಿದರೇನು? ಗುಣಕ್ಕೆ ಮತ್ಸರವೇ? ಹೆಸರಿಗೆ ಮಾತ್ರ ಬ್ರಾಹ್ಮಣನೆನಿಸಿಕೊಂಡು ನೀಚ ಕೃತ್ಯಗಳನ್ನು ಮಾಡುತ್ತಾ ಬಂದರೆ ಅವನು ನಿಜವಾದ ಹೊಲೆಯನಿಗಿಂತ ಕಡೆ. ಹೀನ ಕುಲದಲ್ಲಿ ಹುಟ್ಟಿದವನಾದರೂ, ಒಳ್ಳೆಯ ನಡತೆಯುಳ್ಳವನಾಗಿದ್ದರೆ ಅವನು ಬ್ರಾಹ್ಮಣನಿಗಿಂತಲೂ ಉತ್ತಮನೆಂದು ಲೋಕವೇ ಹೊಗಳುವುದು. ದೇವಭಕ್ತರಲ್ಲಿ ಶ್ರೇಷ್ಠರಾದ **ರೋಹಿದಾಸ, ಚೋಕಾಮೇಳ, ಕನಕ, ಕಬೀರ, ತುಕಾರಾಂ** ಮುಂತಾದವರು ಯಾವ ಯಾವ ಜಾತಿಯವರಾಗಿದ್ದರೋ! ಅವರ ಚರಿತ್ರೆಗಳನ್ನು ಕೇಳಿ ತಿಳಿದರೆ ನಿಮಗೆ ಉತ್ತಮವಾದ ನಡತೆಯೇ ಗೌರವಕ್ಕೆ ಹೇತುವೆಂದು ಗೊತ್ತಾಗಬಹುದು. **ಭೀಷ್ಮನು** ಈ ಮೂವರು ಮಕ್ಕಳನ್ನು ಬಲು ಪ್ರೀತಿಯಿಂದ ಸಾಕುತ್ತಾ ಬಂದನು. ಅವರಿಗೆ ಬಿಲ್ಲುವಿದ್ಯೆಯನ್ನೂ, ಶಸ್ತ್ರಗಳ ಅಭ್ಯಾಸವನ್ನೂ, ಆನೆ ಕುದುರೆಗಳ ಸವಾರಿಯನ್ನೂ, ರಾಜನೀತಿ, ಧರ್ಮಶಾಸ್ತ್ರ ಮೊದಲಾದ ವಿದ್ಯೆಗಳನ್ನೂ ತಕ್ಕ ಪಂಡಿತರಿಂದ ಕಲಿಸಿಕೊಟ್ಟನು. ಅವರಲ್ಲಿ ಹಿರಿಯವನಾಗಿದ್ದ **ಧೃತರಾಷ್ಟ್ರನು** ಕುರುಡನಾದುದರಿಂದ ತನ್ನ ತಂದೆಯ ತರುವಾಯ ರಾಜ್ಯವಾಳುವುದಕ್ಕೆ ತಕ್ಕವನಲ್ಲದೆ ಹೋದನು. ಎರ

ಡನೆಯ ಮಗನಾದ **ಪಾಂಡುರಾಜ**ನಿಗೆ ಪಟ್ಟವನ್ನು ಕಟ್ಟಿ ಸಿಂಹಾಸನವನ್ನು ಏರಿಸಿದರು. ಧೃತರಾಷ್ಟ್ರನ ರಾಣಿಯು **ಗಾಂಧಾರಿ**. ಈಕೆಯ ಹೊಟ್ಟೆಯಲ್ಲಿ **ದುರ್ಯೋಧನನು, ದುಶ್ಶಾಸನನು** ಮುಂತಾದ ಹೆಸರುಗಳನ್ನು ಪಡೆದ ನೂರು ಮಂದಿ ಮಕ್ಕಳೂ, **ದುಸ್ಸಳೆ** ಎಂಬ ಹೆಣ್ಣು ಮಗಳೂ ಹುಟ್ಟಿದರು. ಇವರಿಗೆಲ್ಲಾ **ಕೌರವ**ರೆಂದು ಹೆಸರು. ಇವರಲ್ಲಿ ಉತ್ತಮರೊಬ್ಬರೂ ಇರಲಿಲ್ಲ. ಪಾಂಡುರಾಜನಿಗೆ **ಕುಂತಿ, ಮಾದ್ರಿ** ಎಂಬ ಇಬ್ಬರು ಹೆಂಡಿರು ಇದ್ದರು. ಇವರಲ್ಲಿ ಕುಂತಿಗೆ **ಯುಧಿಷ್ಠಿರನೂ** (ಇವನಿಗೆ ಧರ್ಮರಾಯನೆಂಬುದು ಪ್ರಸಿದ್ಧವಾದ ಹೆಸರು) **ಭೀಮನು, ಅರ್ಜುನನು,** ಎಂಬ ಮೂವರು ಮಕ್ಕಳು ಹುಟ್ಟಿದರು. ಮಾದ್ರಿ ದೇವಿಗೆ **ನಕುಲ, ಸಹದೇವ**ರೆಂಬ ಅವಳಿ ಮಕ್ಕಳು ಹುಟ್ಟಿದರು. ಈ ಐದು ಮಂದಿಗೂ ಪಾಂಡವರೆಂದು ಹೆಸರು. ಪಾಂಡುರಾಯನು ಬಹುಕಾಲ ಬದುಕಲಿಲ್ಲ. ಕಾಡಿಗೆ ಬೇಟೆಗೆ ಹೋಗಿದ್ದಾಗ ಸತ್ತನು. **ಮಾದ್ರಿಯು** ಅವನನ್ನು ಸುಡುತ್ತಿದ್ದ ಚಿತಾಗ್ನಿಯಲ್ಲಿ ಬಿದ್ದು ಪ್ರಾಣಬಿಟ್ಟಳು. ಈ ಪದ್ಧತಿಗೆ ಸಹಗಮನವೆಂದು ಹೆಸರು. ಪೂರ್ವಕಾಲದಲ್ಲಿ ಬಹುಮಂದಿ ಹೆಂಗಸರು ಪತಿಭಕ್ತಿಯಿಂದ ಆತನು ಸತ್ತಮೇಲೆ ಹೀಗೆ ಪ್ರಾಣಗಳನ್ನು ಕಳೆದುಕೊಳ್ಳುತ್ತಲಿದ್ದರು. ಪಾಂಡುರಾಯನು ಸತ್ತುಹೋದ ಮೇಲೆ ಅವನ ಮಕ್ಕಳಿಗೆ ದಿಕ್ಕಿಲ್ಲದೆ ಹೋದ ಕಾರಣ ಅವರನ್ನು ಭೀಷ್ಮನೇ ಕರೆಯಿಸಿ ಸಾಕಿಕೊಂಡು ಹೆಸರಿಗೆ ಮಾತ್ರ ಧೃತರಾಷ್ಟ್ರನಿಗೆ ಪಟ್ಟವನ್ನು ಕಟ್ಟಿ ಅವನ ಹೆಸರಿನಲ್ಲಿ ತಾನೇ ಪೋಷಕನಾಗಿ ರಾಜ್ಯಕಾರ್ಯಗಳನ್ನು ನಡೆಸುತ್ತ ಬಂದನು.

ಕೌರವರಲ್ಲಿ ಹಿರಿಯವನಾದ ದುರ್ಯೋಧನನು ಬಲಶಾಲಿ. ಆದರೂ ಗರ್ವಿಷ್ಠನು. ಅವನು ತಾನೇ ಚಕ್ರವರ್ತಿಯಾಗಬೇಕೆಂತಲೂ, ತಾನು ಹೇಳಿದ ಹಾಗೆ ಎಲ್ಲರೂ ನಡೆದುಕೊಳ್ಳಬೇಕೆಂತಲೂ ಬಯಸುತ್ತಾ ಇದ್ದನು. ತಮ್ಮಪ್ಪನು ಹಿರಿಯವನಾಗಿರುವಾಗ ಕಿರಿಯವನಾದ ಪಾಂಡುವು ರಾಜ್ಯವಾಳುವುದೂ ಅವನ ತರುವಾಯ ಅವನ ಮಕ್ಕಳು ದೊರೆಗಳಾಗುವುದೂ ಸರಿಯಲ್ಲವೆಂದು ಅವನು ತಿಳಿಸಿದನು. ತನ್ನ ಕೆಲಸ ನೆರವೇರಬೇಕಾದರೆ ಆ ಪಾಂಡವ

ರನ್ನು ನಾಶಮಾಡಿ ಅವರ ಪಾಲನ್ನು ತಾನು ಹೊತ್ತುಹಾಕಬೇಕು. ಅವರು ಬದುಕಿದ್ದರೆ ರಾಜ್ಯದಲ್ಲಿ ಅರ್ಧವನ್ನು ಅವರಿಗೆ ಹಂಚಿಕೊಡಬೇಕಾಗುವುದು. ಲೋಕನಿಂದೆ ತಡೆಯುವುದು ಕಷ್ಟ ಎಂದು ಚಿಕ್ಕಂದಿನಿಂದಲೂ ಆಲೋಚಿಸುತ್ತಾ ಅವನು ಪಾಂಡವರ ಕೇಡನ್ನೇ ಹಾರೈಸುತ್ತಿದ್ದನು.

---

## ಎರಡನೆಯ ಪಾಠ.

ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನ, ದುಶ್ಶಾಸನ ಮೊದಲಾದ ನೂರು ಮಂದಿಯೂ ಪಾಂಡುವಿನ ಮಕ್ಕಳಾದ ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ ಎಂಬ ಐದು ಮಂದಿಯೂ ಸೇರಿ ಚಿಕ್ಕಂದಿನಿಂದಲೂ ಒಂದೇ ಕಡೆಯಲ್ಲಿ ಬೆಳೆಯುತ್ತಲೂ, ಆಡುತ್ತಲೂ, ಒಬ್ಬ ಗುರುವಿನ ಹತ್ತಿರವೇ ಓದುಬರಹಗಳನ್ನು ಕಲಿಯುತ್ತಲೂ ಬಂದರು. ಅವರಿಗೆ ಮೊದಲು ವಿದ್ಯೆ ಕಲಿಸಿದವನು **ಕೃಪಾಚಾರ್ಯ**ನು. ಈತನು ಅವರಿಗೆಲ್ಲಾ ಬಾಣಗಳನ್ನು ಪ್ರಯೋಗಿಸುವುದು, ತಮ್ಮ ಮೇಲೆ ಬಿದ್ದ ಬಾಣಗಳ ಗುರಿ ತಪ್ಪಿಸಿಕೊಳ್ಳುವುದು, ಕತ್ತಿ ಮೊದಲಾದ ಆಯುಧಗಳನ್ನು ತಿರುಗಿಸುವುದು ಮೊದಲಾದ ಹಲವು ವಿದ್ಯೆಗಳನ್ನು ಕಲಿಸಿದನು. ಕೆಲವು ದಿನಗಳ ತರುವಾಯ ಆತನ ಭಾವನಾದ **ದ್ರೋಣಾಚಾರ್ಯ**ನನ್ನು ಗುರುವಾಗಿ ಏರ್ಪಡಿಸಿಕೊಂಡು ಅವನಿಂದ ಹಲವು ಧನುರ್ವಿದ್ಯೆಗಳನ್ನು ಕಲಿತುಕೊಂಡರು. ಈ ಕೌರವ ಪಾಂಡವರಲ್ಲಿ ಹಿರಿಯವನಾದ ಯುಧಿಷ್ಠಿರನು ಉತ್ತಮನೆನಿಸಿಕೊಂಡನು. ಅವನ ತಮ್ಮನಾದ ಭೀಮನು ಒಳ್ಳೆಯ ಬಲಶಾಲಿ, ಅವನಿಗೆ ಹತ್ತು ಸಾವಿರ ಆನೆಗಳ ಬಲವಿತ್ತೆಂದು ಹೇಳುವರು. ಅವನನ್ನು ಕಂಡರೆ ಎಲ್ಲರೂ ನಡಗುತ್ತಲಿದ್ದರು. ದುರ್ಯೋಧನನೂ ಅವನ ತಮ್ಮಂದಿರೂ ಇವನ ಬಲವನ್ನು ನೋಡಿ ಸಹಿಸಲಾರದೆ ಹೋದರು. ಅವನನ್ನು ಕಂಡು ಹೊಟ್ಟೇಕಿಚ್ಚು ಪಡುತ್ತಲಿದ್ದರು. ಮೂರನೆಯವನಾದ ಅರ್ಜುನನು ಬಹು ಬುದ್ಧಿಶಾಲಿ ಮತ್ತು ಬಲಿಷ್ಠನು. ಇವನು ಅಸ್ತ್ರವಿದ್ಯೆಯಲ್ಲಿಯೂ ಶಸ್ತ್ರವಿದ್ಯೆಯಲ್ಲಿಯೂ ಎಲ್ಲರಿಗಿಂತ ಶ್ರೇಷ್ಠನಾಗಿದ್ದನು. ಗುರುವಿನಲ್ಲಿ ಇವನಿಗೆ

ಭಯವೂ ಭಕ್ತಿಯೂ ಹೆಚ್ಚಾಗಿದ್ದುವು. ಇವನ ವಿಧೇಯತೆಗೂ ವಿನಯಕ್ಕೂ ಮೆಚ್ಚಿ ಗುರುವಿಗೆ ಇವನ ಮೇಲೆ ಪ್ರೀತಿ ಹೆಚ್ಚಾಯಿತು. ಇದನ್ನು ಕೌರವರು ತಡೆಯಲಾರದೆ ಹೋದರು. ಪಾಂಡವರಲ್ಲಿ ಕಡೆಯವರಾದ ಇಬ್ಬರು ಯುದ್ಧವಿದ್ಯೆಗಳನ್ನೆಲ್ಲಾ ಚೆನ್ನಾಗಿ ಕಲಿತುಕೊಂಡು **ಅಣ್ಣಂದಿರ ಅಪ್ಪಣೆ ಯನ್ನು ಗೆರೆಮೀರದೆ ನಡೆದುಕೊಳ್ಳುತ್ತಲಿದ್ದರು.**

ಪಾಂಡವರಿಗೆ ಇನ್ನೂ ಒಬ್ಬ ಅಣ್ಣನಿದ್ದನು. ಅವನು ಕುಂತೀದೇವಿಗೆ ಬಾಲ್ಯದಲ್ಲಿ ಹುಟ್ಟಿದವನು. ಕುಂತಿಯು ಮದುವೆಗೆ ಮುಂಚೆ ಅವನನ್ನು ಹೆತ್ತುಬಿಟ್ಟಿದ್ದರಿಂದ ಲೋಕನಿಂದೆಗೆ ಹೆದರಿ ಎಳೆಯ ಕೂಸನ್ನು ಪೆಟ್ಟಿಗೆ ಯಲ್ಲಿಟ್ಟು ಗಂಗಾನದಿಯಲ್ಲಿ ತೇಲಿಸಿಬಿಟ್ಟಳು. ಹಸ್ತಿನಾಪುರದ ಸೂತನೊಬ್ಬನು ನದಿಯಲ್ಲಿ ತೇಲಿಕೊಂಡು ಬರುತ್ತಲಿದ್ದ ಪೆಟ್ಟಿಗೆಯನ್ನು ತೆಗೆದುಕೊಂಡು ಅದರಲ್ಲಿದ್ದ ಮಗುವನ್ನು ನೋಡಿ ಸಂತೋಷದಿಂದ ಸಾಕಿದನು. ಅವನ ಹುಟ್ಟು ಯಾರಿಗೂ ತಿಳಿಯದು; ಆದ್ದರಿಂದ ಅವನು ಅರಸು ಮಗನೆಂದು ಒಬ್ಬರಿಗೂ ಗೊತ್ತಾಗಲಿಲ್ಲ. ಆ **ಕರ್ಣ**ನೂ ಕೂಡ ದ್ರೋಣಾಚಾರ್ಯರ ಹತ್ತಿರದಲ್ಲೇ ಈ ರಾಜಕುಮಾರರ ಜತೆಯಲ್ಲಿ ಸಕಲ ವಿದ್ಯೆಗಳನ್ನೂ ಅಭ್ಯಾಸ ಮಾಡಿ ಅರ್ಜುನನಿಗೆ ಸಮುಕಕ್ಷಿಯಾಗಿದ್ದನು. ಅವನು ದುರ್ಯೋಧನನಿಗೆ ನಂಬಿಕೆಯಾದ ಸ್ನೇಹಿತನಾಗಿ ಅವನ ಆಪ್ತನೆನಿಸಿಕೊಂಡಿದ್ದನು. ದುರ್ಯೋ ಧನನು ಅವನಿಗೆ **ಅಂಗದೇಶ**ದ ಪಟ್ಟ ಕಟ್ಟಿ ಅವನನ್ನು ತನ್ನ ಹತ್ತಿರ ಇಟ್ಟುಕೊಂಡಿದ್ದನು.

ಭೀಮನು ತುಂಬಾ ಬಲವಂತನೆಂದು ಲೋಕಕ್ಕೆಲ್ಲಾ ಪ್ರಸಿದ್ಧವಾಯಿತು. ಅವನ ಹೆಸರು ಹೇಳಿದರೆ ಎಲ್ಲರಿಗೂ ಭಯ. ಅವನ ತಂಟೆಗೆ ಹೋದರೆ ಅವರನ್ನು ಪ್ರಾಣದಿಂದ ಬಿಡುತ್ತಿರಲಿಲ್ಲ. ಅವನು ತನ್ನ ಒಂದು ಕಂಕುಳಲ್ಲಿ ಹತ್ತು ಮಂದಿಯನ್ನೂ ಇನ್ನೊಂದು ಕಂಕುಳಲ್ಲಿ ಹತ್ತು ಮಂದಿಯನ್ನೂ ಇರುಕಿಸಿಕೊಂಡು ಸ್ವಲ್ಪವೂ ಭಾರವಿಲ್ಲದವನ ಹಾಗೆ ಓಡಿಹೋಗುತ್ತಿದ್ದನು. ಯಾರಾದರೂ ಅವನಿಗೆ ಹೆದರಿ ಮರದ ಮೇಲೆ ಹತ್ತಿದರೆ ಭೀಮನು ಆ ಮರ ವನ್ನು ಅಲ್ಲಾಡಿಸಿಬಿಡುವನು. ಆ ಮರ ಮುರಿದು ಬಿದ್ದು ಮೇಲಿದ್ದವನು

ಉರುಳಿ ಸಾಯುವನು. ಹೇಗಾದರೂ ಮಾಡಿ ಇವನನ್ನು ತೀರಿಸಿಬಿಡದಿದ್ದರೆ ತಮಗೆ ವಿನಾಶವು ತಪ್ಪದೆಂದು ಕೌರವರು ಹೆದರಿದರು. ಇವನನ್ನು ಕೊಂದು ಬಿಡಬೇಕೆಂದು ಆಲೋಚಿಸಿ ಅವರು ಹಲವು ಪ್ರಯತ್ನಗಳನ್ನು ಮಾಡಿದರು. ಅವನು ಉಣ್ಣುವ ಅನ್ನದಲ್ಲಿ ವಿಷವನ್ನು ಬೆರಸಿ ತಿನ್ನಿಸಿದರು. ಅದನ್ನು ತಿಂದು ಭೀಮನು ಮೈಮರೆತನು. ಪ್ರಜ್ಞೆಯಿಲ್ಲದ ಅವನನ್ನು ಕಟ್ಟಿ ಎತ್ತಿ ಕೊಂಡು ಹೋಗಿ ಹೊಳೆಯಲ್ಲಿ ಬಿಸುಟರು. ಇವನು ನೀರಿನಲ್ಲಿ ಕೊಚ್ಚಿ ಕೊಂಡು ಹೋಗುತ್ತಿರುವಾಗ ಹಾವುಗಳು ಇವನನ್ನು ಕಡಿದು ಅವನ ಹೊಟ್ಟೆಯಲ್ಲಿದ್ದ ವಿಷವನ್ನೆಲ್ಲಾ ಹೀರಿಬಿಟ್ಟವು. ಅವನಿಗೆ ತಗಲಿದ ವಿಷವೆಲ್ಲಾ ಹೊರಟುಹೋದ್ದರಿಂದ ಅವನು ಬದುಕಿಕೊಂಡು ಮನೆಗೆ ಹೋಗಿ ಸೇರಿದನು. ಅಣ್ಣ ತಮ್ಮಂದಿರು ಈ ಸುದ್ದಿಯನ್ನು ಕೇಳಿ ಕೌರವನನ್ನು ಶಿಕ್ಷಿಸಬೇಕೆಂದು ಯೋಚಿಸಿದರು. ಆದರೆ ಯುಧಿಷ್ಠಿರನು ವಿದುರನ ಬುದ್ಧಿಯ ಮಾತುಗಳನ್ನು ಕೇಳಿ ದುರ್ಯೋಧನನ ತಂಟೆಗೆ ಹೋಗದೆ ಅವನು ಮಾಡಿದ ತಪ್ಪುಗಳನ್ನು ಮನ್ನಿಸಿಬಿಟ್ಟನು.

ಯುಧಿಷ್ಠಿರನ ಉತ್ತಮ ಗುಣಗಳನ್ನು ನೋಡಿ ದೇಶದ ಜನರೆಲ್ಲಾ ಅವ ನನ್ನು ಹೊಗಳುತ್ತಾ ಇದ್ದರು. ವಯಸ್ಸಿನಲ್ಲಿ ದೊಡ್ಡವನೂ ನೀತಿವಂತನೂ ಧರ್ಮಿಷ್ಠನೂ ಆದ ಇವನೇ ತಮಗ ರಾಜನಾಗಲು ತಕ್ಕವನೆಂದು ಆಡಿ ಕೊಳ್ಳುತ್ತಲಿದ್ದರು. ಕೌರವರ ಕೆಟ್ಟ ನಡತೆಗಳು ದೇಶದ ಜನರಿಗೆ ಸರಿಬೀಳ ಲಿಲ್ಲ. ಅವನಿಗೆ **ಶಕುನಿ**ಯೆಂಬ ಸೋದರಮಾವನೊಬ್ಬನು ಇದ್ದನು. ಅವನು **ಗಾಂಧಾರ** ದೇಶದ ದೊರೆಯ ಮಗನು. ಅವನೂ ಕರ್ಣನೂ ಸೇರಿ ಆ ಪಾಂಡವರನ್ನು ಪಟ್ಟಣದಿಂದ ಹೊರಡಿಸಿಬಿಟ್ಟ ಹೊರತು ಕ್ಷೇಮ ವಿಲ್ಲವೆಂದು ಒತ್ತಿ ಒತ್ತಿ ಹೇಳುತ್ತಾ ಬಂದರು. ಈ ಮಾತು ದುರ್ಯೋಧನನ ಮನಸ್ಸಿಗೆ ನೆಟ್ಟಿತು. ಅಣ್ಣ ತಮ್ಮಂದಿರೆಲ್ಲರೂ ಒಗ್ಗಟ್ಟಾಗಿ ಇರುವುದಕ್ಕೆ ಆಗುವುದಿಲ್ಲವೆಂತಲೂ, ಪಾಂಡವರನ್ನಾಗಲಿ, ತಮ್ಮನ್ನಾಗಲಿ ಬೇರೆ ಕಡೆಗೆ ಕಳುಹಿಸಿಬಿಡಬೇಕೆಂತಲೂ ಅವರು ಧೃತರಾಷ್ಟ್ರನನ್ನು ಬೇಡಿಕೊಂಡರು. ಅವನು ತನ್ನ ಮಕ್ಕಳ ಮಾತಿಗೆ ಮರುಳಾಗಿ ಪಾಂಡವರನ್ನು **ವಾರಣಾವತ**

ವೆಂಬ ಪಟ್ಟಣಕ್ಕೆ ಹೋಗಿ ಕೆಲವುಕಾಲ ಇದ್ದು ಬರಬೇಕೆಂದು ಹೇಳಿದನು. ಅದೂ ಹಸ್ತಿನಾಪಟ್ಟಣದಂತೆಯೇ ಒಂದು ದೊಡ್ಡ ಪಟ್ಟಣ. ಅಲ್ಲಿ ಕೌರವರ ಕಾಟವಿಲ್ಲದೆ ಸುಖವಾಗಿ ರಾಜ್ಯವನ್ನು ಆಳಿಕೊಂಡು ಇರಬಹುದು. ಯುಧಿಷ್ಠಿರನೂ ಅದಕ್ಕೆ ಒಪ್ಪಿಕೊಂಡನು. ರಾಜನ ಅಪ್ಪಣೆಯಂತೆ ತಮ್ಮಂದಿರೂ ತಾಯಿಯಾದ ಕುಂತಿಯೂ ಅಲ್ಲಿಗೆ ಹೋಗಿ ಸೇರಿದರು. ಅಷ್ಟರಲ್ಲಿ ದುರ್ಯೋಧನನು ತನ್ನ ನಂಬಿಕೆಯ ಭೃತ್ಯನಾದ **ಪುರೋಚನ**ನನ್ನು ರಹಸ್ಯವಾಗಿ ಕರೆಯಿಸಿಕೊಂಡು ಅವನನ್ನು ನೋಡಿ "ಎಲಾ! ನೀನು ಮುಂಚೆಯೇ ಹೋಗಿ ಪಾಂಡವರು ಬರುವಾಗ್ಗೆ ಒಂದು ಅರಗಿನ ಮನೆಯನ್ನು ಕಟ್ಟಿ ಸಿದ್ಧ ಮಾಡು. ಅರಗು, ಸಜ್ಜರಸ, ಗಂಧಕ, ಮೇಣ ಮುಂತಾದ ವಸ್ತುಗಳಿಂದಲೇ ಅದನ್ನು ಕಟ್ಟಿಸು. ಅವರು ಅದರಲ್ಲಿ ವಾಸಮಾಡುತ್ತಿರುವಾಗ ರಾತ್ರಿಯ ಹೊತ್ತು ಒಬ್ಬರಿಗೂ ತಿಳಿಯದಂತೆ ಆ ಅರಮನೆಗೆ ಬೆಂಕಿ ಹತ್ತಿಸಿ ಸುಟ್ಟುಬಿಡು. ಇದು ಒಬ್ಬರಿಗೂ ತಿಳಿಯದ ಹಾಗೆ ಬಲು ಗುಟ್ಟಾಗಿರಲಿ ಎಂದು ಅಪ್ಪಣೆ ಕೊಟ್ಟು ಕಳುಹಿದನು. **ಪುರೋಚನ**ನು ಅವನ ಆಜ್ಞೆಯನ್ನು ನೆರವೇರಿಸಿ ಪಾಂಡವರನ್ನು ಆ ಮನೆಗೆ ಸೇರಿಸಿದನು. ವಿದುರನಿಗೆ ಈ ಸುದ್ದಿ ಹೇಗೋ ತಿಳಿಯಿತು. ಅವನು ಆ ರಹಸ್ಯವನ್ನು ಧರ್ಮರಾಯನಿಗೆ ಗುಟ್ಟಾಗಿ ತಿಳಿಸಿ ಬಲು ಎಚ್ಚರವಾಗಿರಬೇಕೆಂದು ಹೇಳಿಕಳುಹಿಸಿದನು. ಮತ್ತು ನಂಬಿಕೆಯಾದ ಒಬ್ಬ ಸೇವಕನ ಮೂಲಕ ಆ ಅರಮನೆಯೊಳಗೆ ನೆಲದಲ್ಲಿ ಒಂದು ಸುರಂಗವನ್ನು ಅಗೆದು ಊರ ಹೊರಗಿನ ರಾಜಮಾರ್ಗಕ್ಕೆ ಬೆರಸುವಂತೆ ಏರ್ಪಡಿಸಿ ಅವರಿಗೆ ಅದನ್ನು ತೋರಿಸಿದನು. ಈ ಸುದ್ದಿ ಮತ್ತೊಬ್ಬರಿಗೂ ತಿಳಿಯದು. ಪುರೋಚನನು ಆ ಮನೆಗೆ ಉರಿ ತೋರಿಸಬೇಕೆಂದು ಗೊತ್ತುಮಾಡಿಕೊಂಡಿದ್ದ ದಿನ ರಾತ್ರಿ ಎಲ್ಲರೂ ಹಬ್ಬದ ಅಡಿಗೆಯನ್ನುಂಡು ಮೈಮರೆತು ನಿದ್ರಿಸುತ್ತಾ ಇದ್ದರು. ಆಗ ಭೀಮನು ತನ್ನ ನಾಲ್ಕರು ಒಡಹುಟ್ಟಿದವರನ್ನೂ ತಾಯಿಯನ್ನೂ ಎತ್ತಿಕೊಂಡು ಆ ಸುರಂಗಮಾರ್ಗವಾಗಿ ಹೋಗಿ ಅಡವಿಯಲ್ಲಿ ಸೇರಿಸಿ ತಾನೇ ಆ ಮನೆಗೆ ಬೆಂಕಿ ಹೊತ್ತಿಸಿ ತಾನು ಕ್ಷೇಮವಾಗಿ ಅವರ ಜತೆಗೆ ಹೋಗಿ ಸೇರಿದನು. ಆ ರಾತ್ರಿ ಯಾರೋ ಒಬ್ಬ ಬೇಡರ ಹೆಂಗಸು

ತನ್ನ ಐದು ಮಂದಿ ಮಕ್ಕಳ ಸಂಗಡ ಪ್ರಯಾಣಮಾಡಿಕೊಂಡು ಬಂದು ಇಳಿದುಕೊಳ್ಳಲಿಕ್ಕೆ ಬೇರೇ ಸ್ಥಳ ಸಿಕ್ಕದೆ ಆ ಅರಮನೆಯ ಜಗಲಿಯ ಮೇಲೆಯೇ ಮಲಗಿದ್ದಳು. ಆ ರಾತ್ರಿ ಮನೆಯೆಲ್ಲಾ ಸುಟ್ಟು ಬೂದಿಯಾಗಿ ಹೋಯಿತು. ಅಲ್ಲಿ ಮಲಗಿದ್ದವಳೂ ಅವಳ ಮಕ್ಕಳೂ ಪುರೋಚನನೂ ಬೆಂದು ಬೂದಿಯಾದರು. ತಾನು ಒಂದು ನೆನೆದರೆ ದೈವವು ಮತ್ತೊಂದನ್ನು ಮಾಡಿಬಿಡುವುದು. ಅಯ್ಯೋ! ಪಾಪ! ಏನೂ ಕಂಡು ಅರಿಯದ ಹೆಂಗಸು ತನ್ನ ಮಕ್ಕಳೊಂದಿಗೆ ಸುಟ್ಟುಹೋದಳು. ಮರುದಿನ ಬೆಳಗ್ಗೆ ಊರಿನವರೆಲ್ಲಾ ಬಂದು ನೋಡಿದರು. ಒಬ್ಬ ಹೆಂಗಸೂ ಐದು ಜನ ಮಕ್ಕಳೂ ಸುಟ್ಟುಹೋದರು. ಕುಂತಿಯೂ ಪಾಂಡವರೂ ಮೃತ್ಯುವಿಗೆ ತುತ್ತಾದರೆಂದು ತಿಳಿದು ಗೋಳಾಡಿದರು. ಕೌರವರಿಗೆ ಒಳಗೆ ಸಂತೋಷ, ಹೊರಕ್ಕೆ ಅದನ್ನು ತೋರ್ಪಡಿಸದೆ ಇತರರಂತೆ ಅವರೂ ಅತ್ತರು. ಪಾಂಡವರು ಮೃತರಾದರೆಂದು ಎಲ್ಲರೂ ಗೋಳಾಡಿದರು. ಅವರು ಸಾಯದೇ ಬದುಕಿರುವರೆಂದು ವಿದುರನೊಬ್ಬನು ಮಾತ್ರ ತಿಳಿದುಕೊಂಡು ಆ ರಹಸ್ಯವನ್ನು ಹೊರಪಡಿಸದೆ ಇದ್ದನು.

---

## ಮೂರನೆಯ ಪಾಠ.

ಪಾಂಡವರು ಅಗ್ನಿಬಾಧೆಯಿಂದ ತಪ್ಪಿಸಿಕೊಂಡು ಬಹುದೂರ ಹೊರಟುಹೋದರು. ನಿದ್ದೆಯಿಂದ ತೂಗಡಿಸುತ್ತಿದ್ದವರನ್ನೆಲ್ಲಾ ಭೀಮಸೇನನೊಬ್ಬನೇ ಹೊತ್ತುಕೊಂಡು ಹೋಗಿ ಬಹುದೂರ ನಡೆದು ಆಯಾಸಗೊಂಡು ಬೆಳಗಾಗುವ ಹೊತ್ತಿಗೆ ಒಂದು ಘೋರವಾದ ಕಾಡಿನಲ್ಲಿ ಮರದ ಕೆಳಗೆ ಅವರನ್ನು ಇಳಿಸಿ ಮೈಮರೆತಿದ್ದ ಅವರಿಗೆ ಕಾವಲಾಗಿ ಕಾದುಕೊಂಡಿದ್ದನು. ಬೆಳಗಾಯಿತು. ಅಷ್ಟು ಹೊತ್ತಿಗೆ **ಹಿಡಿಂಬ**ನೆಂಬ ರಾಕ್ಷಸನು ಆ ಕಡೆ ತಿರುಗಾಡುತ್ತಲಿದ್ದನು. ರಾಕ್ಷಸರಿಗೆ ಮನುಷ್ಯರ ಮಾಂಸದ ಮೇಲೆ ಬಹಳ ಆಸೆ. ಅವನು ವಾಸನೆಯಿಂದ ಅಲ್ಲಿಗೆ ಯಾರೋ ಬಂದಿರುವರೆಂದು ತಿಳಿದು ತನ್ನ ತಂಗಿಯಾದ **ಹಿಡಿಂಬಿ**ಯನ್ನು ಕರೆದು ಅವರನ್ನು ಕೊಂದು

ತರಬೇಕೆಂದು ಹೇಳಿಕಳುಹಿದನು. ಆ ಹೆಂಗಸು ಅಲ್ಲಿಗೆ ಬಂದು ಭೀಮನ ಆಕಾರವನ್ನು ನೋಡಿ ಅವನನ್ನು ಮೋಹಿಸಿ ತನ್ನ ಅಣ್ಣನು ಹೇಳಿದ ಮಾತನ್ನು ತಿಳಿಸಿದಳು. "ನೀನು ನನ್ನನ್ನು ಮದುವೆ ಮಾಡಿಕೋ, ನಾವಿಬ್ಬರೂ ಎಲ್ಲಿಗಾದರೂ ಹೊರಟುಹೋಗೋಣ. ನಮ್ಮ ಅಣ್ಣನು ಬಂದು ಇವರನ್ನು ತಿಂದುಹಾಕಲಿ," ಎಂದು ಬೇಡಿಕೊಂಡಳು. ಭೀಮನು ಅದಕ್ಕೆ ಒಪ್ಪಲಿಲ್ಲ. "ಛೀ! ಛೀ! ಎಂತಹ ಮಾತನಾಡುವೆ? ನಿಮ್ಮ ಅಣ್ಣನಿಗೆ ಹೆದರಿ ಓಡಿಹೋಗಬೇಕೇ? ಅಣ್ಣತಮ್ಮಂದಿರನ್ನು ಅವನಿಗೆ ಬಲಿಕೊಟ್ಟು ನನ್ನ ಜೀವವನ್ನು ಉಳಿಸಿಕೊಳ್ಳಬೇಕೇ? ಭ್ರಷ್ಟೆ! ತೊಲಗಿಹೋಗು," ಎಂದು ಗದರಿಕೊಂಡನು. ಇವರ ವಾಗ್ವಾದದಿಂದ ತಡವಾಯಿತು. ಹಿಡಿಂಬನೇ ಅವರನ್ನು ಹುಡುಕಿಕೊಂಡು ಬಂದನು. ತಂಗಿಯನ್ನು ದುರದುರನೆ ನೋಡಿ ಅವಳ ಮೇಲೆ ರೇಗಿದನು. ಅವಳು ಭೀಮನ ಮೊರೆ ಬಿದ್ದಳು. ಭೀಮನಿಗೂ ಹಿಡಿಂಬನಿಗೂ ಬಲವಾದ ಯುದ್ಧ ನಡೆಯಿತು. ರಾಕ್ಷಸನು ಭೀಮನ ಪೆಟ್ಟುಗಳು ತಡೆಯಲಾರದೆ ಪ್ರಾಣಗಳನ್ನು ಬಿಟ್ಟುಬಿಟ್ಟನು.

ಅಷ್ಟರಲ್ಲಿ ಮಲಗಿದ್ದವರೆಲ್ಲಾ ಎದ್ದು ಕುಳಿತರು. ಹಿಡಿಂಬಿಯಿಂದ ಅಲ್ಲಿ ನಡೆದ ವರ್ತಮಾನಗಳನ್ನೆಲ್ಲಾ ತಿಳಿದರು. ಭೀಮನು ಜಯಶಾಲಿಯಾಗಿ ಬಂದು ತಾಯಿಗೂ ಅಣ್ಣನಿಗೂ ನಮಸ್ಕರಿಸಿದನು. ಅವರು ಅವನನ್ನು ಹರಸಿದರು. ಹಿಡಿಂಬಿಯು ತನ್ನ ಆಸೆಯನ್ನು ಕುಂತಿದೇವಿಯಲ್ಲಿ ಹೇಳಿಕೊಂಡಳು. ಅವಳನ್ನು ಮದುವೆಮಾಡಿಕೊಳ್ಳೆಂದು ತಾಯಿಯು ಭೀಮನಿಗೆ ಹೇಳಿದಳು. **ಅಣ್ಣನಿಗೆ ಮದುವೆ ಇಲ್ಲದಿರುವಾಗ ತಾನು ಈ ಕೆಲಸ ಮಾಡಿಕೊಳ್ಳಲಾರೆ**ನೆಂದು ಭೀಮನು ತಿರಸ್ಕರಿಸಿದನು. ತಾನಾಗಿಯೇ ವರಿಸಿ ಬಂದ ಹೆಂಗಸನ್ನು ಉಪೇಕ್ಷಿಸಬಾರದೆಂದು ಅವಳೂ ಧರ್ಮರಾಯನೂ ಭೀಮನಿಗೆ ತಿಳಿಯಹೇಳಿದರು. ಅವನು ಅವರ ಮಾತನ್ನು ಮೀರಲಿಲ್ಲ. ಅವರ ಅಪ್ಪಣೆಯಂತೆ ಆಕೆಯನ್ನು ಮದುವೆಯಾದನು. **ಹಿರಿಯರ ಅಪ್ಪಣೆಯನ್ನು ನಡೆಯಿಸುವುದು ಧರ್ಮ. ಯಾರೇ ಆಗಲಿ ತಾಯಿ ತಂದೆಗಳು, ಗುರುಗಳು, ಅಣ್ಣನು ಇವರ ಮಾತುಗಳನ್ನು**

**ನಿರ್ಬಾರದು.** ಭೀಮನು ಆ ಹೆಂಗಸನ್ನು ಮದುವೆಯಾಗಿ ಅವರ ಅಪ್ಪಣೆಯಿಂದ ಕೆಲವು ಕಾಲ ಆ ವನದಲ್ಲಿಯೇ ಸುಖವಾಗಿದ್ದನು. ಅವಳೂ ಪತಿಯೊಂದಿಗೆ ಒಂದು ಗುಹೆಯಲ್ಲಿ ವಾಸಮಾಡಿಕೊಂಡು ಹಣ್ಣು ಹಂಪಲು ಗಳನ್ನೂ ಗೆಡ್ಡೆ ಗೆಣಸುಗಳನ್ನೂ ತಿಂದುಕೊಂಡು ಕಾಲಹರಣ ಮಾಡುತ್ತಿದ್ದಳು. ಆಹಾ! ಕಾಲಗತಿಯು ಮನುಷ್ಯರನ್ನು ಏನೇನು ಮಾಡುವುದೋ ಯಾರಿಗೂ ತಿಳಿಯದು. ಅರಮನೆಯಲ್ಲಿ ರಾಜಭೋಗಗಳನ್ನು ಅನುಭವಿಸತಕ್ಕ ಅರಸರಿಗೆ ಎಂತಹ ಗತಿ ಬಂತು! ಕನಸು ಮನಸುಗಳಲ್ಲಿ ಕೂಡ ಹೀಗಾಗುವುದೆಂದು ಅವರಿಗೆ ತಿಳಿಯದು. "ಕಾಲವು ಲಕ್ಷಾಧಿಕಾರಿಯಿಂದ ಭಿಕ್ಷ ಬೇಡಿಸುವುದು. ತಿರುಪೆಯವನನ್ನು ತೆಗೆದುಕೊಂಡು ಹೋಗಿ ಸಿಂಹಾಸನದ ಮೇಲೆ ಕುಳ್ಳಿರಿಸು ವುದು; ಅದರ ಶಕ್ತಿ ಇಷ್ಟೇ ಎಂಬುದು ಯಾರಿಗೂ ತಿಳಿಯದು. ಅದು ಯಾರಿಗೆ ಯಾವಾಗ ಏನು ಮಾಡುವುದೋ ಎಂಬುದು ಒಬ್ಬರಿಗೂ ಗೊತ್ತಾಗುವುದಿಲ್ಲ. ಇದಲ್ಲವೇ ದೈವವಿಲಾಸ."

ಕೆಲವು ದಿನಗಳಲ್ಲಿ ಆ ರಾಕ್ಷಸಿಯು ಒಬ್ಬ ಮಗನನ್ನು ಹಡೆದಳು. ಆ ಮಗನಿಗೆ **ಘಟೋತ್ಕಚ**ನೆಂದು ಹೆಸರಿಟ್ಟಳು. ಅವನು ತನ್ನ ತಂದೆ ಯಾದ ಭೀಮನಂತೆಯೇ ಬಲು ಶಕ್ತಿಯುಳ್ಳವನಾಗಿದ್ದನು. ಅವನ ಅಂಗ ಗಳೆಲ್ಲಾ ಧೃಡವಾಗಿದ್ದವು. ಆ ಹಿಡಿಂಬಿಯನ್ನು ನೋಡಿ ಯುಧಿಷ್ಠಿರನು "ತಂಗೀ! ಈ ವನವು ನಿನಗೆ ಸೇರಿದ್ದು, ನೀನು ಇಲ್ಲಿಯೇ ಮಗನನ್ನು ಸಾಕಿ ಕೊಂಡಿರು, ನಾವು ಬೇಕಾದಾಗ ನಿನ್ನನ್ನು ಕರೆಯಿಸಿಕೊಳ್ಳುವೆವು, ದಾಯಾದಿ ಗಳಾದ ಕೌರವರಿಗೆ ನಮ್ಮ ಸುದ್ದಿ ತಿಳಿಯಲಾಗದು, ನಾವು ಮುಂದೆ ಹೊರಡುವೆವು," ಎಂದು ಹೇಳಿದನು. ಆಕೆಯು ಅವರ ಅಪ್ಪಣೆಗೆ ಒಪ್ಪಿ ಕೊಂಡಳು. ಅಷ್ಟರಲ್ಲಿ **ವ್ಯಾಸ**ಮಹಾಋಷಿಗಳು ಅಲ್ಲಿಗೆ ಬಂದರು. ಪಾಂಡವರು ಅವರನ್ನು ಕಂಡು ನಮಸ್ಕರಿಸಿದರು. ಆ ಮಹಾತ್ಮನು ಅವ ರನ್ನು ಮನ್ನಿಸಿ ನೀವು ಈ ವೇಶದಿಂದಿದ್ದರೆ ಕೌರವರು ಹೇಗಾದರೂ ನಿಮ್ಮನ್ನು ಕಂಡುಹಿಡಿಯುವರು. ನೀವು ಬ್ರಾಹ್ಮಣ ವೇಶವನ್ನು ಧರಿಸಿ ಈ ಮಾರ್ಗ ದಲ್ಲಿಯೇ ಹೋಗಿರಿ, ಹತ್ತಿರದಲ್ಲಿಯೇ **ಏಕಚಕ್ರ**ವೆಂಬ ಒಂದು ಅಗ್ರಹಾರ

ಸಿಕ್ಕುವುದು, ಅಲ್ಲಿ ಬಹು ಜನ ಬ್ರಾಹ್ಮಣರು ವಾಸಮಾಡಿಕೊಂಡಿರುವರು, ಅಲ್ಲಿಯೇ ನೀವು ಕೆಲವುಕಾಲವಿರಬಹುದು ಎಂದು ಹೇಳಿದರು. ಪಾಂಡವರು ಅವರ ಅಪ್ಪಣೆಯಂತೆ ಅಲ್ಲಿಂದ ಹೊರಟು ಹೋಗಿ ಅಗ್ರಹಾರವನ್ನು ಸೇರಿದರು. ಅಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಒಂದು ಕೋಣೆಯಲ್ಲಿ ಇಳಿದುಕೊಂಡರು. ಅವರೆಲ್ಲರೂ ಭಿಕ್ಷವನ್ನು ಬೇಡಿ ತಂದು ತಿಂದು ಜೀವಿಸಿಕೊಂಡಿದ್ದರು. ಅಲ್ಲಿ ಅವರಿಗೆ ಯಾವ ಕೊರತೆಯೂ ಇರಲಿಲ್ಲ.

ಆ ಪಟ್ಟಣದ ಹತ್ತಿರ ಒಂದು ದೊಡ್ಡ ಕಾಡು. ಅದರಲ್ಲಿ **ಬಕ**ನೆಂಬ ರಾಕ್ಷಸನೊಬ್ಬನಿದ್ದನು. ಅವನು ನಿತ್ಯವೂ ಅಗ್ರಹಾರದೊಳಕ್ಕೆ ನುಗ್ಗಿ, ಕೈಗೆ ಸಿಕ್ಕಿದವರನ್ನೆಲ್ಲಾ ಕೊಂದು ತಿಂದುಹಾಕಿ ಬಿಡುತ್ತಿದ್ದನು. ಅವನ ಬಾಧೆಯನ್ನು ತಡೆಯಲಾರದೆ ಎಲ್ಲರೂ ಅವನಿಗೆ ಸಮ್ಮತಿ ಹೇಳಿ ದಿನಕ್ಕೆ ಒಂದು ಬಂಡಿ ಕೂಳನ್ನು ತಕ್ಕ ಸಾಮುಗ್ರಿಗಳೊಂದಿಗೆ ಒಬ್ಬ ಮನುಷ್ಯನನ್ನೂ ಬಲಿಯಾಗಿ ಒಪ್ಪಿಸುತ್ತಾ ಬರುವೆವು. ಒಂದೇ ಸಾರಿ ನೀನು ಎಲ್ಲರನ್ನೂ ತಿಂದುಬಿಟ್ಟರೆ ನಾವು ಬದುಕಲಾರೆವು, ಎಂದು ಕೇಳಿಕೊಂಡರು. ಆ ರಾಕ್ಷಸನು ಹಾಗೆಯೇ ಆಗಲೆಂದು ಒಪ್ಪಿಕೊಂಡು ಅಂದಿನಿಂದ ಯಾರ ತಂಟೆಗೂ ಹೋಗದೆ ಕಾಡಿನಲ್ಲಿ ಸುಖವಾಗಿದ್ದನು. ಆ ಊರಿನವರು ಸರದೀ ಮೇರಿಗೆ ನಿತ್ಯವೂ ಸಾಮುಗ್ರಿಗಳನ್ನೂ ಒಬ್ಬ ಮನುಷ್ಯನನ್ನೂ ಅವನ ಆಹಾರಕ್ಕಾಗಿ ಕಳುಹಿಸುತ್ತಾ ಬಂದರು. ಹೀಗಿರುವಲ್ಲಿ ಒಂದು ದಿನ ಈ ಪಾಂಡವರು ಇಳಿದುಕೊಂಡಿದ್ದ ಮನೆಯ ಯಜಮಾನನ ಸರದಿಗೆ ಬಂತು. ಆ ಮನೆಯಲ್ಲಿ ಗಂಡ, ಹೆಂಡತಿ, ಒಬ್ಬ ಮಗನು, ಒಬ್ಬ ಮಗಳು ಈ ನಾಲ್ಕು ಮಂದಿ ಮಾತ್ರವಿದ್ದರು. ಅನ್ನ, ಭಕ್ಷ್ಯ, ಭೋಜ್ಯಗಳು ಮುಂತಾದ ಸಾಮಾನುಗಳನ್ನು ಹೇಗಾದರೂ ಒದಗಿಸಬಹುದು. ಅವನಿಗೆ ತುತ್ತಾಗಿ ಹೋಗಿ ಬಲಿಬೀಳತಕ್ಕವರ್ಯಾರು? ಎಂದು ದೊಡ್ಡ ಗೋಳು ಉಂಟಾಯಿತು. ಭೀಮನಿಗೆ ಅದು ತಿಳಿಯಿತು. ಅವನು ತನ್ನ ತಾಯಿಯನ್ನು ನೋಡಿ "ಇವರು ಏಕೆ ಹೆದರಬೇಕು? ಆ ರಾಕ್ಷಸನನ್ನು ಕೊಂದುಹಾಕಲಿಕ್ಕೆ ನಾನಿಲ್ಲವೇ? ಇವರಿಗೆ ಧೈರ್ಯ ಹೇಳಿ ಒಪ್ಪಿಸು, ಒಂದು ಬಂಡಿ ಅನ್ನವನ್ನೂ ನನ್ನ ವಶಕ್ಕೆ ಕೊಡಲಿ, ನಾನು ಹಸಿವನ್ನು ತಡೆಯಲಾರೆನು,

ಹೊಟ್ಟೇ ತುಂಬ ತಿಂದು ಅವನನ್ನು ಮಟ್ಟಹಾಕಿ ಬರುವೆನು. ನೀನೂ ಚಿಂತಿಸ ಬೇಡ'' ಎಂದು ಹೇಳಿದನು. ಕುಂತಿಗೆ ಮಗನ ಶಕ್ತಿ ಗೊತ್ತುಂಟು. ಅವಳು ಅದಕ್ಕೆ ಒಪ್ಪಿ ಆ ಮನೆಯ ಯಜಮಾನನಿಗೆ ಹೇಳಿದಳು. ಅವನು ಸಮ್ಮತಿಸಿ ಎಲ್ಲವನ್ನೂ ಅಣುಮಾಡಿಕೊಟ್ಟನು.

ಭೀಮನು ಆಹಾರ ಸಾಮಗ್ರಿಗಳನ್ನು ತುಂಬಿ ಎತ್ತುಗಳನ್ನು ಹೂಡಿದ್ದ ಗಾಡಿಯ ಮೇಲೆ ಕುಳಿತು, ನಿಧಾನವಾಗಿ ಅದನ್ನು ತೆಗೆದುಕೊಂಡು ತನಗೆ ಬೇಕಾದವುಗಳನ್ನು ತಿನ್ನುತ್ತಾ ಹೋದನು. ಕಾಲಕ್ಕೆ ಸರಿಯಾಗಿ ಬಂದಿಲ್ಲ ವೆಂದು ಬಕನು ಎದುರು ನೋಡುತ್ತಾ ಹಸಿವಿನಿಂದಲೂ ಕೋಪದಿಂದಲೂ ಕಂಗೆಟ್ಟು ಉರಿದುಬೀಳುತ್ತಿದ್ದನು. ಭೀಮನ ಗಾಡಿ ಬಂದದ್ದನ್ನು ನೋಡಿ ಇಷ್ಟು ತಡವೇಕೆ ಮಾಡಿದೆ? ಎಂದು ಅವನ ಮೇಲೆ ರೇಗಿದನು. ಅವರಿಬ್ಬ ರಿಗೂ ಘೋರವಾದ ಯುದ್ಧ ನಡೆಯಿತು. ಅದರಲ್ಲಿ ಭೀಮನು ಬಕಾಸುರ ನನ್ನು ಕೊಂದುಬಿಟ್ಟು ಅವನ ಹೆಣವನ್ನು ತಂದು ಊರು ಬಾಗಿಲಿಗೆ ತೋರಣವಾಗಿ ಕಟ್ಟಿದನು. ಆ ನಗರದಲ್ಲಿದ್ದವರಿಗೆಲ್ಲಾ ಬಹು ಸಂತೋಷ ವಾಯಿತು. ಮುಂದೆ ಯಾವ ತೊಂದರೆಯೂ ಇಲ್ಲದೆ ಸುಖವಾಗಿರಬಹು ದೆಂದು ತಿಳಿದರು. ಭೀಮನ ಶಕ್ತಿ ಸಾಹಸಗಳನ್ನು ಬಹಳವಾಗಿ ಹೊಗಳಿ ದರು. ಬಹುಕಾಲ ಬದುಕೆಂದು ತಾಯಿಯನ್ನೂ ಮಕ್ಕಳನ್ನೂ ಹರಸಿದರು. ಭೀಮನಿಗೆ ಹಲವು ಬಗೆಯ ಬಹುಮಾನಗಳನ್ನು ಕೊಟ್ಟರು. ಪಾಂಡವರು ಅಲ್ಲಿ ಕೆಲವು ಕಾಲ ಸುಖವಾಗಿದ್ದರು.

---

## ನಾಲ್ಕನೆಯ ಪಾಠ.

ಒಂದಾನೊಂದು ದಿವಸ ಹಲವು ಬ್ರಾಹ್ಮಣರು ಆ ಅಗ್ರಹಾರದ ಮಾರ್ಗ ವಾಗಿ ಬಂದು ಪಾಂಡವರು ಇಳಿದಿದ್ದ ಮನೆಯಲ್ಲಿಯೇ ಉಳಿದು ಕೊಂಡರು. ಆಗ ಪ್ರಸಂಗವಶದಿಂದ ಯುಧಿಷ್ಠಿರನು ಅವರ ಕ್ಷೇಮ ಸಮಾಚಾರಗಳನ್ನು ವಿಚಾರಿಸಿದ ಮೇಲೆ ನೀವು ಎಲ್ಲಿಗೆ ಹೋಗುವಿರಿ? ಎಂದು ಕೇಳಿದನು. ಅವರು **ಪಾಂಚಾಲ ದೇಶ**ದಲ್ಲಿ ರಾಜನಾದ **ದ್ರುಪದ**

ನಿಗೆ **ದ್ರೌಪದಿ**ಯೆಂಬ ಅಂದವಾದ ಕನ್ಯೆ ಇರುವಳೆಂತಲೂ ಅವಳಿಗೆ ಸ್ವಯಂವರ (ತಾನಾಗಿಯೇ ಗಂಡನನ್ನು ಆರಿಸಿ ಮದುವೆ ಮಾಡಿಕೊಳ್ಳುವುದು) ವಿವಾಹವು ನಡೆಯುವುದೆಂತಲೂ ಅಲ್ಲಿ ಹೋದವರಿಗೆ ಬಗೆಬಗೆಯ ಆಹಾರ ಪದಾರ್ಥಗಳೂ, ವಸ್ತ್ರಗಳೂ, ಭೂರಿ ದಕ್ಷಿಣೆಗಳೂ ಸಿಕ್ಕುವವೆಂತಲೂ ಅಲ್ಲಿಗೆ ನಾನಾ ದೇಶಗಳಿಂದ ಜನರು ತಂಡ ತಂಡವಾಗಿ ಹೋಗುತ್ತಿರುವರೆಂತಲೂ, ಹೇಳಿದರು. ಯುಧಿಷ್ಠಿರನು ಅವರ ಜೊತೆಯಲ್ಲಿ ತಾವೂ ಹೋಗಿ ಮಹೋತ್ಸವವನ್ನು ನೋಡಿ ಬರಬೇಕೆಂದು ಯೋಚಿಸಿ, ತಾಯಿಯನ್ನೂ ತಮ್ಮಂದಿರನ್ನೂ ಕರೆದುಕೊಂಡು ಅಲ್ಲಿಂದ ಹೊರಟನು. ಹೋಗುವಾಗ ದಾರಿಯಲ್ಲಿ ಒಂದು ರಾತ್ರಿ ಒಬ್ಬ ಗಂಧರ್ವನಿಗೂ (ಸ್ವರ್ಗಲೋಕದ ಸಂಗೀತಗಾರನು) ಅರ್ಜುನನಿಗೂ ಬಲವಾದ ಯುದ್ಧವಾಗಿ ಅವನು ಸೋತುಹೋದನು. ಅರ್ಜುನನು ಅವನನ್ನು ಕೊಲ್ಲದೆ ಪ್ರಾಣ ಉಳಿಸಿದ್ದರಿಂದ ಅವನು ಸಂತೋಷಪಟ್ಟು ತನ್ನ ದಿವ್ಯಾಸ್ತ್ರಗಳನ್ನು ಆ ಶೂರನಿಗೆ ಕೊಟ್ಟನು. ಮತ್ತು **ಧೌಮ್ಯ**ನೆಂಬ ಮುನಿಯ ಆಶ್ರಮವನ್ನು ತೋರಿಸಿದನು. ಪಾಂಡವರು ಅಲ್ಲಿಗೆ ಹೋಗಿ ಆ ಮಹರ್ಷಿಯನ್ನು ಕಂಡು ಅವನನ್ನು ತಮ್ಮ ಪುರೋಹಿತನನ್ನಾಗಿ ಮಾಡಿಕೊಂಡು ಆತನೊಂದಿಗೆ **ಪಾಂಚಾಲ** ದೇಶಕ್ಕೆ ಹೋದರು. ಆ ದ್ರೌಪದೀ ಸ್ವಯಂವರಕ್ಕೆ **ಕೌರವರು, ಶ್ರೀಕೃಷ್ಣ, ಬಲರಾಮ** ಮೊದಲಾದ **ಯಾದವರು, ಕರ್ಣನೂ, ಶಿಶುಪಾಲ, ಜರಾಸಂಧ** ಮೊದಲಾದ ರಾಜಕುಮಾರರೂ ಬಂದಿದ್ದರು. ಬ್ರಾಹ್ಮಣ ಕ್ಷತ್ರಿಯರು ಮಾತ್ರವಲ್ಲದೆ, ಇತರ ವರ್ಣದ ಜನಗಳೂ ಬಹು ಮಂದಿ ಬಂದು ಸೇರಿದ್ದರು. ಸ್ವಯಂವರಕ್ಕೆ ಗೊತ್ತಾಗಿದ್ದ ದಿನ ದೊಡ್ಡ ಸಭೆಯಲ್ಲಿ ಇವರೂ ಸೇರಿದರು. ಮಂಟಪದ ನಡುವೆ ಆಕಾಶದಲ್ಲಿ ಕಟ್ಟಿದ್ದ ಒಂದು ಮೀನಿನ ಕಣ್ಣನ್ನು ಅದರ ಕೆಳಗೆ ಇಟ್ಟಿದ್ದ ಬಿಲ್ಲಿಗೆ ಅಂಬನ್ನು ಹೂಡಿ ಗುರಿ ತಪ್ಪದೆ ಯಾವನು ಹೊಡೆದು ಕೆಡಹುವನೋ ಅವನಿಗೆ ದ್ರೌಪದಿಯು ಮದುವೆಯಾಗತಕ್ಕವಳೆಂದು ದಂಡೋರೆ ಹೊಡೆಯಿಸಿದನು. ರಾಜಕುಮಾರರೆಲ್ಲಾ ನಾನು ಮುಂದು ತಾನು ಮುಂದೆಂದು ಆ ಮತ್ಸ್ಯಯಂತ್ರವನ್ನು ಗುರಿಯಿಟ್ಟು ಹೊಡೆಯುವು

ದಕ್ಕೆ ಆತುರಗೊಂಡು ಬಂದರು. ಮಹಾ ಶೂರರೂ ಧನುರ್ವಿದ್ಯಾ ಪಂಡಿತರೂ ಆದ ಆ ರಾಜರಲ್ಲಿ ಒಬ್ಬನಾದರೂ ಅದರ ಗುರಿಯನ್ನು ಸರಿಯಾಗಿ ಇಟ್ಟು ಹೊಡೆಯಲಾರದೆ ಸೋತುಹೋದರು. ಕರ್ಣ ದುರ್ಯೋಧನಾದಿಗಳೂ ಹೊಡೆಯಲಾರದೆ ಹೋದರು. ಕಡೆಗೆ ಅರಸು ಮಕ್ಕಳಲ್ಲಿ ಒಬ್ಬರೂ ಯಂತ್ರವನ್ನು ಭೇದಿಸಲಿಲ್ಲ. ಬ್ರಾಹ್ಮಣರಲ್ಲಿ ಯಾರಾದರೂ ಶೂರರಿದ್ದರೆ ಬಂದು ಯಂತ್ರವನ್ನು ಭೇದಿಸಬಹುದೆಂದು ರಾಜನು ಹೇಳಿದನು. ಆಗ ಬ್ರಾಹ್ಮಣರ ಗುಂಪಿನಲ್ಲಿ ಕುಳಿತಿದ್ದ ಅರ್ಜುನನು ಬಂದು ನಿಂತು ಒಂದು ನಿಮಿಷದಲ್ಲಿ ಬಿಲ್ಲನ್ನು ಬಗ್ಗಿಸಿ ಗುರಿತಪ್ಪದೆ ಆ ಬಿಲ್ಲಿನಲ್ಲಿ ಬಾಣವನ್ನು ಹೂಡಿ ಬಿಟ್ಟು ಕೆಳಕ್ಕೆ ಕೆಡಹಿದನು. ಆಗ ದ್ರೌಪದಿಯು ತನ್ನ ಕೈಯಲ್ಲಿ ಹಿಡಿದಿದ್ದ ಹೂ ಮಾಲೆಯನ್ನು ಅರ್ಜುನನ ಕೊರಳಲ್ಲಿ ಹಾಕಿದಳು. ದೊರೆಗಳಿಗೆಲ್ಲಾ ಅವಮಾನವಾಯಿತು. ಹಾರುವರಿಗೆಲ್ಲಾ ಸಂತೋಷ. ಆ ಬ್ರಾಹ್ಮಣ ಮದುಮಗನನ್ನು ಕೊಂದುಬಿಡಬೇಕೆಂದು ರಾಜರುಗಳು ಎಲ್ಲರೂ ಯುದ್ಧಕ್ಕೆ ನಿಂತರು. ಬಲಶಾಲಿಯಾದ ಭೀಮನು ಒಂದುಕಡೆ, ಅರ್ಜುನನು ಒಂದು ಕಡೆ ನಿಂತು ಗುಂಪನ್ನೆಲ್ಲಾ ಚದರಿಸಿ ಓಡಿಸಿಬಿಟ್ಟರು. ಎಲ್ಲವೂ ಶಾಂತವಾದ ಮೇಲೆ ಅವರು ಬ್ರಾಹ್ಮಣರಲ್ಲವೆಂತಲೂ ಮಾರು ವೇಷದಿಂದಿರುವ ಪಾಂಡವರೆಂತಲೂ ದ್ರುಪದ ರಾಜನಿಗೆ ತಿಳಿಯಿತು. ಅವನು ಬಹು ಸಂತೋಷದಿಂದ ತನ್ನ ಮಗಳನ್ನು ಅರ್ಜುನನಿಗೆ ಕೊಟ್ಟು ಮದುವೆ ಮಾಡಲಿಕ್ಕೆ ಸಿದ್ಧನಾದನು.

ಅಷ್ಟರಲ್ಲಿ ಒಂದು ಅಡ್ಡಿ ಬಂತು. ಅರ್ಜುನನು ಗುಂಪನ್ನು ಚದರಿಸಿ ದ್ರೌಪದಿಯನ್ನು ತಾವು ಇಳಿದಿದ್ದ ಮನೆಗೆ ಕರೆದುಕೊಂಡು ಹೋದನು. ಅವರ ತಾಯಿ ಕೋಣೆಯಲ್ಲಿ ಮನೆಗೆಲಸದಲ್ಲಿದ್ದಳು. ಅವನು "ಅಮ್ಮಾ! ಇಂದು ಒಂದು ಬಗೆಯ ಅಪೂರ್ವವಾದ ಭಿಕ್ಷೆ ತಂದಿರುವೆ"ನೆಂದು ಹೇಳಿದನು. "ಮಗು! ನೀವು ಐವರೂ ಅದನ್ನು ಹಂಚಿಕೊಂಡು ಉಣ್ಣಿ"ರೆಂದು ಆಕೆಯ ಬಾಯಿಂದ ಹೊರಟುಹೋಯಿತು. ಹೊರಕ್ಕೆ ಬಂದು ನೋಡಿದಳು! ಸುಂದರವಾದ ಹೆಣ್ಣು ಮಗಳು! ಭಿಕ್ಷಾನ್ನದಂತೆ ಅವಳನ್ನು ಹಂಚಿಕೊಳ್ಳಲಿಕ್ಕೆ

ಆದೀತೆ? ಏನು ಮಾಡಬಹುದು? ಎಂದು ದೊಡ್ಡ ಯೋಚನೆ ಹುಟ್ಟಿತು. ಯಂತ್ರವನ್ನು ಭೇದಿಸಿದ ನೀನೇ ಈ ಹುಡುಗಿಗೆ ಗಂಡನು, ನೀನೊಬ್ಬನೇ ಇವಳನ್ನು ಮದುವೆಯಾಗಿ ಸುಖಪಡು ಎಂದು ತಾಯಿಯೂ ಅಣ್ಣನೂ ಎಷ್ಟೆಷ್ಟೋ ಹೇಳಿದರು. ಅರ್ಜುನನು ಅದಕ್ಕೆ ಒಪ್ಪಲಿಲ್ಲ. **ತಾಯಿಯ ಮಾತೇ ವೇದವಾಕ್ಯವು, ನಾವು ಅದನ್ನು ಎಂದಿಗೂ ಮೀರಬಾರದು, ತಾಯಿತಂದೆಗಳ ಮಾತು ಮೀರುವುದು ಮಹಾ ಪಾತಕವು, ನಿನ್ನ ಅಪ್ಪಣೆಯಂತೆ ನಾವು ಐದು ಮಂದಿಯೂ ದ್ರೌಪದಿಯನ್ನು ಮದುವೆಯಾಗಲೇ ಬೇಕು** ಎಂದು ಹಟಹಿಡಿದನು. ಬೇರೆ ಉಪಾಯ ವಿಲ್ಲ. ರಾಜನು ಇವರನ್ನೆಲ್ಲಾ ಅರಮನೆಗೆ ಕರೆಯಿಸಿಕೊಂಡನು. ಇವರ ಸಮಾಚಾರಗಳನ್ನೆಲ್ಲಾ ತಿಳಿದನು. ಒಬ್ಬ ಹೆಂಗಸಿಗೆ ಐದು ಮಂದಿ ಗಂಡಂದಿ ರುಂಟೇ? ಲೋಕ ಧರ್ಮಕ್ಕೆ ಇದು ವಿರೋಧವೆಂದು ಹೇಳಿದನು. ಆಗ ಋಷಿಗಳೂ, ವಿಧ್ಯಾವಂತರೂ ಬಹುಮಂದಿ ಸೇರಿದರು. ತಾಯಿಯ ಅಪ್ಪಣೆ ಯೊಂದು ಮತ್ತು ದೇವತೆಗಳ ವರ ಒಂದು ಇನ್ನೂ ಇತರ ಕೆಲವು ಕಾರಣಗಳು ಇವುಗಳಿಂದ ಆ ರಾಜಕುಮಾರಿಯು ಐದು ಮಂದಿಗೂ ಹೆಂಡತಿಯಾಗತಕ್ಕ ವಳು ಎಂದು ತೀರ್ಮಾನವಾಯಿತು. ಬಹು ಸಂಭ್ರಮದಿಂದ ವಿವಾಹ ಮಹೋತ್ಸವವು ಜರುಗಿತು. **ಇದಲ್ಲವೇ ನಿಜವಾದ ಮಾತೃ ಭಕ್ತಿ! ಹೆಂಡತಿಯ ಮಾತನ್ನು ಕೇಳಿಕೊಂಡು ಹೆತ್ತ ತಾಯಿಯ ಸೊಂಟ ಮುರಿಯಲಿಕ್ಕೆ ಹೇಸದ ಹೇಡಿಗಳು ಎಷ್ಟು ಮಂದಿ ಇದ್ದರೆ ಫಲ ವೇನು? ಅರ್ಜುನನಂತಹ ಸುಪುತ್ರನನ್ನು ಹಡೆದ ತಾಯಿಯ ಜನ್ಮವೇ ಜನ್ಮವು! ಪೂರ್ವಕಾಲದಲ್ಲಿ ಇಂತಹ ಸತ್ಪುತ್ರರು ಎಷ್ಟೋ ಮಂದಿ ಹುಟ್ಟಿ ಕೀರ್ತಿ ಪಡೆದರು. ಈ ಕಾಲದಲ್ಲಿ ಅದು ಬದಲಾ ಯಿಸಿ ಹೋಗಿದೆ. ನಿಮ್ಮಂಥವರು ಅದನ್ನು ತಪ್ಪಿಸಿ ಪೂರ್ವದ ಕೀರ್ತಿಯನ್ನು ಉಳಿಸಲಿಕ್ಕೆ ಯತ್ನಪಡಿರಿ!**

ಪಾಂಡವರು ಬದುಕಿರುವರೆಂದು ಲೋಕಕ್ಕೆಲ್ಲಾ ತಿಳಿದುಹೋಯಿತು. ಧೃತರಾಷ್ಟ್ರರಾಯನಿಗೆ ಈ ಸುದ್ದಿ ತಿಳಿಯಿತು. ಶತ್ರುಗಳು ನಾಶವಾದರೆಂದು

ತಿಳಿದಿದ್ದೆವಲ್ಲಾ! ಅರಗಿನ ಮನೆಯಲ್ಲಿ ಸಾಯದೆ ಇವರು ಹೇಗೆ ತಪ್ಪಿಸಿಕೊಂಡರೋ! ದೇವರ ಅನುಗ್ರಹವು ಅವರಲ್ಲಿ ಹೆಚ್ಚಾಗಿರುವುದು. ಈಗ ಮಾಡತಕ್ಕದ್ದೇನು! ಎಂದು ಆ ರಾಯನು ಮಂತ್ರಿಯಾದ ವಿದುರನ ಸಂಗಡ ಆಲೋಚನೆ ಮಾಡಿದನು. ಅದಕ್ಕಾತನು "ಅಯ್ಯಾ ಪ್ರಭುವೇ! ನ್ಯಾಯವಾಗಿ ರಾಜ್ಯಕ್ಕೆ ಅವರೇ ಅರ್ಹರು, ನೀನು ದೊರೆತನ ಮಾಡಿಕೊಂಡು ಅವರನ್ನು ಓಡಿಸಿಬಿಡುವುದು ಧರ್ಮವಲ್ಲ. ಇಲ್ಲಿಗೆ ಅವರನ್ನು ಕರೆಯಿಸಿಕೊಂಡು ರಾಜ್ಯವನ್ನು ಸಮಭಾಗವಾಗಿ ಹಂಚಿ ಅರ್ಧವನ್ನು ಸರಿಯಾಗಿ ಅವರಿಗೆ ಕೊಟ್ಟು ಬಿಡು; ಉಳಿದ ಅರ್ಧವನ್ನು ನಿನ್ನ ಮಕ್ಕಳು ಅನುಭವಿಸಿಕೊಂಡು ಸುಖವಾಗಿ ಬದುಕಲಿ; ಯಾರಿಗೇನು ಸ್ಥಿರ? **ನಾವು ಬರುವಾಗ ಏನನ್ನೂ ತರುವುದಿಲ್ಲ, ಸತ್ತು ಹೋಗುವಾಗ ಏನನ್ನೂ ತೆಗೆದುಕೊಂಡು ಹೋಗುವುದಿಲ್ಲ, ಈ ಲೋಕದಲ್ಲಿ ಇರುವಷ್ಟು ಕಾಲ ಲೋಭಿ ಎನಿಸಿಕೊಳ್ಳದೆ ಜನಗಳ ಹೊಗಳಿಕೆಗೆ ಪಾತ್ರನಾಗುವುದೇ ನರ ಜನ್ಮಕ್ಕೆ ಸಾರ್ಥಕವು**" ಎಂದು ಹೇಳಿದನು. ದುರ್ಯೋಧನನು, ಕರ್ಣನು ಮೊದಲಾದವರು ಈ ಆಲೋಚನೆಗೆ ಒಡಂಬಡಲಿಲ್ಲ. ಯುದ್ಧಮಾಡಿ ಅವರನ್ನು ಓಡಿಸಿಬಿಡಬಲ್ಲೆವೆಂದು ಹಟಹಿಡಿದರು. ಧೃತರಾಷ್ಟ್ರನೂ, ವಿದುರನೂ, ಭೀಷ್ಮ, ದ್ರೋಣರೂ ಆ ನೀಚರಿಗೆ ಛೀ! ಮಾರಿ! ಹಾಕಿ ಗದರಿಸಿಕೊಂಡು "**ಹಿರಿಯರ ಮಾತು ಮೀರಬೇಡಿರಿ,** ನಿಮ್ಮ ದುರ್ಬುದ್ಧಿಯಿಂದಲೇ ಇಷ್ಟು ಕೇಡು ಉಂಟಾಯಿತು. ಮೊನ್ನೆ ಸ್ವಯಂವರ ಕಾಲದಲ್ಲಿ ನಿಮಗಾದ ಅವಮಾನವೂ ಸಾಲದೇ? ಯುದ್ಧದಲ್ಲಿ ನೀವು ಗೆದ್ದು ಬರುವಿರೆಂಬ ನಂಬಿಕೆಯುಂಟೇ? ಸಾಕು! ಸುಮ್ಮನೆ ಬಿದ್ದಿರಿ" ಎಂದು ಗದರಿಸಿ ತಡೆದರು. ಅವರನ್ನು ಕರೆಯಿಸಿ ಅರ್ಧ ರಾಜ್ಯವನ್ನು ಕೊಟ್ಟು, ಬೇರೆ ಇರಿಸಬೇಕೆಂದು ತೀರ್ಮಾನಿಸಿದರು.

ಬಳಿಕ ರಾಯನು ವಿದುರನನ್ನು ಕರೆದು, ತಮ್ಮಾ ನೀನೇ ಪಾಂಡವರ ಬಳಿಗೆ ಹೋಗಿ, ಅವರಿಗೆ ತಕ್ಕ ಸಮಾಧಾನ ಹೇಳಿ, ರಾಜಮರ್ಯಾದೆಯೊಂದಿಗೆ ಅವರನ್ನು ಕರೆದುಕೊಂಡು ಬಾ ಎಂದು ಹೇಳಿ ದ್ರುಪದರಾಯನ ಪಟ್ಟ

ಣಕ್ಕೆ ಕಳುಹಿಸಿಕೊಟ್ಟನು. ವಿದುರನು ಅಲ್ಲಿಗೆ ಹೋಗಿ ರಾಜಾಜ್ಞೆಯನ್ನು ತಿಳಿಸಿ, ದ್ರೌಪದಿಯೊಂದಿಗೆ ಅವರನ್ನೂ ಕುಂತಿಯನ್ನೂ ಕರೆದುಕೊಂಡು ಧೃತರಾಷ್ಟ್ರನ ಬಳಿಗೆ ಬಂದನು. ಪಾಂಡವರು ಸತ್ತುಹೋದರೆಂದು ದುಃಖಿಸುತ್ತಿದ್ದ ಪುರಜನರೆಲ್ಲಾ ಅವರನ್ನು ಪ್ರತ್ಯಕ್ಷವಾಗಿ ಕಂಡು ಬಹು ಸಂತೋಷಪಟ್ಟರು. ಧೃತರಾಷ್ಟ್ರರಾಯನು ಅವರನ್ನು ಮನ್ನಿಸಿ ಆ ಪಾಂಡವರಿಗೆ ಸರಿಯಾಗಿ ಅರ್ಧ ರಾಜ್ಯವನ್ನು ಕೊಟ್ಟು ಅದಕ್ಕೆ **ಇಂದ್ರಪ್ರಸ್ಥ**ವೆಂಬ ಪಟ್ಟಣವನ್ನು ರಾಜಧಾನಿಯಾಗಿ ಮಾಡಿ ಅವರ ವಾಸಕ್ಕೆ ಅನುಕೂಲವಾದ ಎಲ್ಲ ಸೌಕರ್ಯಗಳನ್ನೂ ಕಲ್ಪಿಸಿಕೊಟ್ಟು ಕಳುಹಿಸಿದನು. ಅವರು ತಮ್ಮ ರಾಜಧಾನಿಗೆ ಹೋಗಿ ಸೇರಿ ಅಲ್ಲಿ ಸುಖವಾಗಿ ಇದ್ದರು.

---

## ಐದನೆಯ ಪಾಠ.

ಪಾಂಡವರು ಇಂದ್ರಪ್ರಸ್ಥ ಪುರದಲ್ಲಿ ಸುಖವಾಗಿ ವಾಸಮಾಡುತ್ತಲಿದ್ದರು. ಅವರಿಗೆ ಅಲ್ಲಿ ಶತ್ರುಗಳ ಕಾಟವಿರಲಿಲ್ಲ. ಯುಧಿಷ್ಠಿರನು ಧರ್ಮದಿಂದ ರಾಜ್ಯವಾಳುತ್ತಿದ್ದುದರಿಂದ ದೇಶ ಜನರೆಲ್ಲಾ ಇವನೇ ಧರ್ಮರಾಯನೆಂದು ಹೊಗಳುತ್ತಿದ್ದರು. ಕೌರವರ ರಾಜ್ಯಕ್ಕಿಂತಲೂ ಇಲ್ಲಿ ನ್ಯಾಯವೂ, ಸೌಖ್ಯವೂ, ದರ್ಪವೂ, ಪ್ರಜಾ ಶಾಂತಿಯೂ ಚೆನ್ನಾಗಿದ್ದುವು. ಹೊರಗಿನಿಂದ ತಂಡ ತಂಡವಾಗಿ ಜನಗಳು ಬಂದು ಮನೆ ಮಾರುಗಳನ್ನು ಕಟ್ಟಿಕೊಂಡು ಆ ದೇಶದಲ್ಲಿ ನೆಲಸುತ್ತಾ ಬಂದರು. ಕಾಡುಗಳೆಲ್ಲಾ ನಾಡುಗಳಾದುವು. ವ್ಯಾಪಾರ, ಕೈಗಾರಿಕೆ, ಕುಶಲವಿದ್ಯೆಗಳು ಹೆಚ್ಚಾದುವು. ಜನರಿಗೆ ಯಾವ ವಿಧವಾದ ತೊಂದರೆಯೂ ಇರಲಿಲ್ಲ.

ಒಂದು ದಿನ ದೇವಋಷಿಯಾದ **ನಾರದನು** ಪಾಂಡವರನ್ನು ನೋಡಿ ಹೋಗಬೇಕೆಂದು ಅಲ್ಲಿಗೆ ಬಂದನು. ಅವರು ಆತನನ್ನು ಕಂಡು ಅರಮನೆಗೆ ಕರೆದುಕೊಂಡು ಹೋಗಿ ಮನ್ನಿಸಿ ಅನ್ನಪಾನಾದಿಗಳಿಂದ ಸಂತೋಷಪಡಿಸಿದರು. ಭೋಜನಾನಂತರ ಆ ಋಷಿಯು ಪಾಂಡವರನ್ನು ನೋಡಿ

ಅವರಿಗೆ ತಕ್ಕ ಬುದ್ಧಿ ಮಾತುಗಳನ್ನು ಹೇಳಿ ಪ್ರಸಂಗವಶದಿಂದ ಯುಧಿಷ್ಠಿರನನ್ನು ಕುರಿತು, "ಮಹಾರಾಜನೇ! ನಿನ್ನ ರಾಜ್ಯದಲ್ಲಿ ಯಾವ ಆಕ್ಷೇಪಕ್ಕೂ ಅವಕಾಶವಿಲ್ಲದೆ ಎಲ್ಲವೂ ಸೌಖ್ಯವಾಗಿವೆ. ಆದರೆ ಒಬ್ಬ ಹೆಂಗಸನ್ನು ನೀವು ಐದು ಮಂದಿಯೂ ಅನುಭವಿಸುತ್ತಿರುವುದು ಮಾತ್ರ ಲೋಕವಿರುದ್ಧವಾಗಿ ಕಾಣುತ್ತದೆ. ಒಂದು ಮಾಂಸದ ತುಂಡಿಗೆ ಎರಡು ಹಕ್ಕಿಗಳು ಸೇರಿದರೆ ಜಗಳ ಉಂಟಾಗದೆ ಇರದು. ಕಲಹಗಳಿಗೂ, ಕೊಲೆ ಪಾತಕಗಳಿಗೂ ಇದೇ ಮುಖ್ಯ ಕಾರಣ, ಇದಕ್ಕೆ ಅವಕಾಶ ಕೊಡಬೇಡಿರಿ" ಎಂದು ಹೇಳಿದನು. ಆಗ ಯುಧಿಷ್ಠಿರನು ಅಜ್ಜಾ! ಈ ವಿಷಯದಲ್ಲಿ ಬಾಲರಾದ ನಮಗೆ ಏನೂ ತೋರದು. ವಯಸ್ಸು, ಜ್ಞಾನ, ಲೋಕಾನುಭವ, ಇವುಗಳನ್ನು ಚೆನ್ನಾಗಿ ಬಲ್ಲ ನೀವೇ ಯೋಚನೆ ಮಾಡಿ, ತಕ್ಕ ಮಾರ್ಗವನ್ನು ಉಪದೇಶಿಸಬೇಕೆಂದು ಬೇಡಿಕೊಂಡನು. ನಾರದನು ಸ್ವಲ್ಪ ಹೊತ್ತು ಯೋಚನೆ ಮಾಡಿ ಆತನ ಮುಖವನ್ನು ನೋಡಿ "ಮಗುವೇ! ಇದಕ್ಕೊಂದು ಉಪಾಯವನ್ನು ಹೇಳುವೆನು ಕೇಳು, ಈ ದ್ರೌಪದಿಯು ನಿಮಗೆಲ್ಲರಿಗೂ ರಾಣಿಯಾಗಿಯೇ ಇರಲಿ, ನೀವು ಪ್ರತ್ಯೇಕವಾಗಿ ಒಬ್ಬೊಬ್ಬ ರಾಜಕುಮಾರಿಯನ್ನು ಮದುವೆಯಾಗಿರಿ, ಬೇರೆ ಬೇರೆ ಅರಮನೆಗಳಲ್ಲಿ ವಾಸವಾಗಿರಿ, ಈ ರಾಣಿಯು ಒಂದೊಂದು ವರ್ಷ ನಿಮ್ಮಲ್ಲಿ ಒಬ್ಬೊಬ್ಬನ ಅಧೀನದಲ್ಲಿ ಪತ್ನಿಯಾಗಿದ್ದುಕೊಂಡಿರಲಿ, ಅವರ ಸರದಿಯಲ್ಲಿ ಮತ್ತಾರಾದರೂ ಸಹೋದರರು ಅವರಿದ್ದ ಸ್ಥಳಕ್ಕೆ ಹೋಗಕೂಡದು, ಹಾಗೆ ಹೋಗಬೇಕಾಗಿ ಬಂದರೆ ಅವರು ಒಂದು ವರ್ಷ ಕಾಲ ಭೂಮಿಯನ್ನೆಲ್ಲಾ ಪ್ರದಕ್ಷಿಣೆ ಮಾಡಿ ಆ ಪಾಪವನ್ನು ಕಳೆದುಕೊಳ್ಳಬೇಕು. ಈ ಕಟ್ಟುಪಾಡಿಗೆ ಒಡಂಬಟ್ಟರೆ ಲೋಕನಿಂದೆ ತಪ್ಪುವುದು, ನಿಮಗೂ ಸುಖವುಂಟಾಗುವುದು ಎಂದು ಅಪ್ಪಣೆ ಕೊಟ್ಟನು. ಈ ಚಟ್ಟದಂತೆ ನಾವು ನಡೆಯುವೆವೆಂದು ಪಾಂಡವರು ಆ ಮುನಿಗೆ ಪ್ರಮಾಣಮಾಡಿಕೊಟ್ಟು ಅದರಂತೆ ನಡೆದುಕೊಳ್ಳುತ್ತಾ ಬಂದರು.

ಹೀಗಿರುವಲ್ಲಿ ಒಂದು ಸಲ ದ್ರೌಪದಿಯು ಯುಧಿಷ್ಠಿರನ ಸರದಿಯಲ್ಲಿ ಅವನೊಂದಿಗೆ ಏಕಾಂತ ಪ್ರದೇಶದಲ್ಲಿದ್ದಳು. ಕಳ್ಳರು ಬಂದು ಒಬ್ಬ

ಬ್ರಾಹ್ಮಣನ ಹಸುಗಳನ್ನು ಕದ್ದುಕೊಂಡು ಹೋಗುತ್ತಿದ್ದರು. ಅವನು ಬಂದು ರಾಜಸ್ಥಾನದಲ್ಲಿ ಮೊರೆಯಿಟ್ಟನು. ಅರ್ಜುನನು ಕಳ್ಳರನ್ನು ಶಿಕ್ಷಿಸಲಿಕ್ಕೆ ಹೊರಟನು. ಆಯುಧಗಳನ್ನು ತರಲಿಕ್ಕೆ ಅವುಗಳನ್ನಿಟ್ಟಿದ್ದ ಅರಮನೆಗೆ ಹೋದನು. ಅಲ್ಲಿ ಅಣ್ಣನೂ ದ್ರೌಪದಿಯೂ ಮಲಗಿದ್ದಾರೆ. ಹೋಗಿ ಅಸ್ತ್ರಗಳನ್ನು ತರದಿದ್ದರೆ ಬ್ರಾಹ್ಮಣನು ಶಾಪ ಕೊಡುವನು; ಒಳಕ್ಕೆ ಹೋದರೆ ಒಂದು ವರ್ಷ ಪ್ರವಾಸಕ್ಕೆ ಹೊರಡಬೇಕು; ಏನು ಮಾಡಲಿಕ್ಕೂ ತೋರದು. ಕೊನೆಗೆ ಆತನು ಒಳಕ್ಕೆ ಹೋಗಿ ಆಯುಧಗಳನ್ನು ತೆಗೆದುಕೊಂಡು ಬಂದು ಕಳ್ಳರನ್ನು ಶಿಕ್ಷಿಸಿ ಬ್ರಾಹ್ಮಣನಿಗೆ ಅವನ ಗೋವುಗಳನ್ನು ಒಪ್ಪಿಸಿದನು. ಬಳಿಕಲಾ ವೀರನು ಅಣ್ಣನ ಬಳಿಗೆ ಬಂದು ನಡೆದ ಸುದ್ದಿಯನ್ನು ತಿಳಿಸಿ ತೀರ್ಥಯಾತ್ರೆಗೆ ಅಪ್ಪಣೆಯನ್ನು ಪಡೆದು ಪ್ರಯಾಣವಾಡಿದನು.

ಆ ಅರ್ಜುನನು ರಾಜವೇಷವನ್ನು ತೆಗೆದುಹಾಕಿ, ಸನ್ಯಾಸಿಯ ಉಡುಪುಗಳನ್ನು ಧರಿಸಿ ತೀರ್ಥಯಾತ್ರೆಗೆ ಹೊರಟನು. ಆತನ ಹಿಂದೆ ಹಲವು ಮಂದಿ ಬ್ರಾಹ್ಮಣರು ಪ್ರಯಾಣವಾಗಿ ಹೋದರು. ಅವನು ಹಲವು ದೇಶಗಳನ್ನು ತಿರುಗಿ **ಹರಿದ್ವಾರ, ಕಾಶಿ, ಗಯಾ** ಮುಂತಾದ ಹಲವು ದಿವ್ಯ ಕ್ಷೇತ್ರಗಳನ್ನು ದರ್ಶನ ಮಾಡಿದನು. **ಗಂಗೆ, ಯಮುನೆ, ಕೃಷ್ಣೆ, ಗೋದಾವರಿ, ಕಾವೇರಿ** ಮುಂತಾದ ದಿವ್ಯ ನದಿಗಳಲ್ಲಿ ಸ್ನಾನವಾಡಿದನು. ಕಡೆಗೆ **ಗಂಗಾದ್ವಾರ**ಕ್ಕೆ ಬಂದು ಅಲ್ಲಿ ಒಂದು ಮರದಡಿಯಲ್ಲಿ ಮೈಮರೆತು ನಿದ್ರಿಸಿದನು. ಆಗ **ನಾಗರಾಜನ** ಮಗಳಾದ **ಉಲೂಪಿ**ಯೆಂಬ ಹೆಂಗಸು ಅರ್ಜುನನ ಸೌಂದರ್ಯಕ್ಕೆ ಮೋಹಿಸಿ ಅವನನ್ನು ಎಬ್ಬಿಸಿ ಮದುವೆವಾಡಿಕೊಂಡಳು. ಬಳಿಕ ಅವನು ಆಕೆಯಿಂದ ಅಪ್ಪಣೆ ಪಡೆದು ಮರಳಿ ತೀರ್ಥಯಾತ್ರೆಗೆ ಹೋಗುತ್ತಾ ಪಶ್ಚಿಮ ಸಮುದ್ರ ತೀರದಲ್ಲಿ ಇರುವ **ಮಣಿಪುರ**ಕ್ಕೆ ಸೇರಿದನು. ಅಲ್ಲಿಯ ರಾಜನ ಮಗಳು **ಚಿತ್ರಾಂಗದೆ**ಯೆಂಬುವಳು. ಅವಳು ಅರ್ಜುನನ ರೂಪವನ್ನು ಕಂಡು ಮೆಚ್ಚಿ ನನ್ನನ್ನು ಅವನಿಗೆ ಕೊಡಬೇಕೆಂದು ತಂದೆಯನ್ನು ಬೇಡಿಕೊಂಡಳು. ಆತನು ಅರ್ಜುನನನ್ನು ಪ್ರಾರ್ಥಿಸಿ ತನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಿ ಆಕೆಯ ಹೊಟ್ಟೆಯಲ್ಲಿ

ಹುಟ್ಟುವ ಮಗನೇ ತನ್ನ ರಾಜ್ಯಕ್ಕೆ ಅರ್ಹನೆಂದು ಏರ್ಪಾಡು ಮಾಡಿದನು. ಆ ಚಿತ್ರಾಂಗದೆಯ ಹೊಟ್ಟೆಯಲ್ಲಿ ಒಬ್ಬ ಮಗನು ಹುಟ್ಟಿದನು. ಅವನಿಗೆ **ಬಭ್ರುವಾಹನ**ನೆಂದು ಹೆಸರು. ಅರ್ಜುನನು ಅಲ್ಲಿ ಕೆಲವುಕಾಲವಿದ್ದು ಮಾವನ ಅಪ್ಪಣೆಯನ್ನು ಪಡೆದು ಮುಂದಕ್ಕೆ ಪ್ರಯಾಣಮಾಡಿದನು.

ಅಲ್ಲಿಂದ ಮುಂದೆ ತನ್ನ ಪ್ರಿಯ ಸ್ನೇಹಿತನಾದ ಶ್ರೀಕೃಷ್ಣನನ್ನು ನೋಡ ಬೇಕೆಂಬ ಆಶೆಯು ಅವನಿಗೆ ಹುಟ್ಟಿತು. ಅಲ್ಲಿಂದ ದ್ವಾರಕೆಗೆ ಹೋಗಿ ಶ್ರೀ ಕೃಷ್ಣನನ್ನು ಕಂಡನು. ಅವರಿಬ್ಬರೂ ಪರಸ್ಪರ ಆಲಿಂಗಿಸಿಕೊಂಡು ಸಂತೋಷ ದಿಂದ ಕ್ಷೇಮಸಮಾಚಾರಗಳನ್ನು ವಿಚಾರಿಸಿದರು. ಅದೇ ಸಂದರ್ಭದಲ್ಲಿ ಶ್ರೀಕೃಷ್ಣನ ತಂಗಿಯಾದ **ಸುಭದ್ರೆ**ಯೆಂಬ ರಾಜಕುಮಾರಿಯನ್ನು ಕೌರವ ರಲ್ಲಿ ಹಿರಿಯವನಾದ ದುರ್ಯೋಧನನಿಗೆ ಕೊಡಬೇಕೆಂದು ಪ್ರಯತ್ನ ನಡೆಯುತ್ತ ಲಿತ್ತು. ಕೃಷ್ಣನ ಅಣ್ಣನಾದ ಬಲರಾಮನು ಈ ಕೆಲಸಕ್ಕೆ ಮುಂದಾಳಾಗಿ ನಿಂತನು. ಈ ಸಂಬಂಧವು ಕೃಷ್ಣನಿಗೆ ಇಷ್ಟವಿಲ್ಲ. ತನ್ನ ಮಿತ್ರನಾದ ಅರ್ಜುನನಿಗೆ ಅವಳನ್ನು ಕೊಡಬೇಕೆಂದು ಅವನ ಅಭಿಪ್ರಾಯ. ತಮ್ಮನ ಮಾತು ಅಣ್ಣನು ಕೇಳುವಹಾಗಿಲ್ಲ. ಮಾಡತಕ್ಕದ್ದೇನು? ಎಂದು ಯೋಚಿಸಿ ದನು. ಆಗ ಒಂದು ಉಪಾಯವನ್ನು ಹುಡುಕಿ ಕೃಷ್ಣನು ಅರ್ಜುನನನ್ನು ಸನ್ಯಾಸಿಯ ವೇಷದಿಂದ ಅರಮನೆಗೆ ಬರಮಾಡಿಕೊಂಡು ಬಲರಾಮ ಮೊದ ಲಾದವರನ್ನು ಏನೋ ಒಂದು ನೆವದಿಂದ ಊರುಬಿಟ್ಟು ಹೊರಡಿಸಿ ಅವರಿಗೆ ತಿಳಿಯದ ಹಾಗೆ ಸುಭದ್ರೆಯನ್ನು ಅರ್ಜುನನಿಗೆ ಮದುವೆ ಮಾಡಿ ಕೊಟ್ಟು ಕಳುಹಿಸಿಬಿಟ್ಟನು. ಕೆಲಸವಾಗಿ ಹೋದ ಮೇಲೆ ಯಾರು ಏನು ಮಾಡ ಲಿಕ್ಕಾದೀತು? ಬಲರಾಮನು ಕೆಟ್ಟಮೋರೆ ಹಾಕಿಕೊಂಡು ಸುಮ್ಮನಾದನು. ಅರ್ಜುನನು ಸುಭದ್ರೆಯನ್ನು ಕರೆದುಕೊಂಡು ಇಂದ್ರಪ್ರಸ್ಥಪುರಕ್ಕೆ ಹೋಗಿ ಸೇರಿದನು. ಅಲ್ಲಿ ಅವನ ಅಣ್ಣತಮ್ಮಂದಿರೂ ತಾಯಿಯೂ ದ್ರೌಪದಿಯೂ ಬಹು ಸಂತೋಷಪಟ್ಟರು. ಈ ಸುಭದ್ರೆಯ ಹೊಟ್ಟೆಯಲ್ಲಿ ಒಂದು ಗಂಡುಮಗು ಹುಟ್ಟಿತು. ಅದಕ್ಕೆ **ಅಭಿಮನ್ಯು**ವೆಂದು ಹೆಸರಿಟ್ಟರು. ಇವನು ತುಂಬಾ

ಬಲಶಾಲಿ, ಮಹಾ ವೀರನಾದವನು. ದ್ರೌಪದಿಗೆ ಈ ಐದು ಜನ **ಪತಿಗ** ಳಿಂದ **ಪ್ರತಿವಿಂಧ್ಯ** ಮೊದಲಾದ ಐದು ಮಂದಿ ಮಕ್ಕಳು ಹುಟ್ಟಿದರು.

ಶ್ರೀ ಕೃಷ್ಣನು ಆಗಾಗ್ಗೆ ಪಾಂಡವರನ್ನು ನೋಡಲಿಕ್ಕೆ ಬಂದು ಹೋಗು ತ್ತಿದ್ದನು. ಒಂದು ಸಾರಿ ಆತನು ಬಂದು ಅರ್ಜುನನೊಂದಿಗೆ ವಿಹಾರ ಮಾಡುತ್ತಾ ಒಂದು ಸ್ಥಳದಲ್ಲಿ ಕುಳಿತು ಏನೇನೋ ಮಾತನಾಡಿಕೊಳ್ಳುತ್ತಾ ಇದ್ದನು. ಆಗ ಅಗ್ನಿದೇವನು ಬ್ರಾಹ್ಮಣ ವೇಷವನ್ನು ಹಾಕಿಕೊಂಡು ಅಲ್ಲಿಗೆ ಬಂದು ಅವರನ್ನು ನೋಡಿ ಮಹಾತ್ಮರೇ! ನನಗೆ ಹಸಿವು ಬಹಳವಾ ಗಿದೆ. ಅನ್ನ ಕೊಟ್ಟು ರಕ್ಷಿಸು ಎಂದು ಬೇಡಿಕೊಂಡನು. ನಿನಗಿಷ್ಟವಾದ ಆಹಾರವನ್ನು ಕೇಳಿಕೊ ಕೊಡುತ್ತೇವೆಂದು ಹೇಳಿದರು. ಅವನು ಅವರನ್ನು, ನೋಡಿ, ತಾನು ಬ್ರಾಹ್ಮಣನಲ್ಲ, ಅಗ್ನಿಯು. ಇಲ್ಲಿರುವ ಖಾಂಡವನದಲ್ಲಿ ತನ್ನ ಆಹಾರಕ್ಕೆ ಅನುಕೂಲವಾದ ಹಲವು ಗಿಡಮೂಲಿಕೆಗಳಿವೆ. ಇವುಗ ಳನ್ನು ನಾನು ತಿನ್ನಬೇಕೆಂದು ಇದ್ದೇನೆ. **ಇಂದ್ರನು** ಇದಕ್ಕೆ ಅಡ್ಡಿಮಾಡುತ್ತ ಲಿದ್ದಾನೆ. ಅವನಬಾಧೆಯಿಂದ ಕಾಪಾಡಿದರೆ ನಾನು ಇವುಗಳನ್ನು ಭಕ್ಷಿಸಿ ಹೋಗುವೆನು ಎಂದು ಪ್ರಾರ್ಥಿಸಿದನು. ಅವರು ಹಾಗೆಯೇ ಆಗಲಿ, ಈ ವನವನ್ನು ದಹಿಸಿಬಿಡು ಎಂದು ಅಪ್ಪಣೆ ಕೊಟ್ಟು ಕಳುಹಿದರು. ಅದನ್ನು ತಡೆಯುವುದಕ್ಕೆ ಇಂದ್ರನು ಏನೇನೋ ಪ್ರಯತ್ನ ಮಾಡಿದನು. ಅದೊಂ ದನ್ನೂ ಇವರು ಸಾಗಗೊಳಿಸಲಿಲ್ಲ. ಅಗ್ನಿಯು ಯಾವ ತೊಂದರೆಯೂ ಇಲ್ಲದೆ ತನ್ನ ಕೋರಿಕೆಯನ್ನು ನೆರವೇರಿಸಿಕೊಂಡು ಅವರನ್ನು ನೋಡಿ ಬಹು ಸಂತೋಷದಿಂದ ಮೆಚ್ಚಿ ಅವರುಪಕಾರಕ್ಕೆ ಪ್ರತಿಯಾಗಿ ಆ ಅರ್ಜುನನಿಗೆ **ಅಕ್ಷಯ ತೂಣೀರ** (ಒಂದು ಬಾಣದ ಚೀಲ. ಅದರಿಂದ ಎಷ್ಟು ಬಾಣ ಗಳನ್ನು ತೆಗೆಯುತ್ತಲಿದ್ದರೂ ಎಂದಿನಂತೆ ತುಂಬಿಯೇ ಇರುವುದು) **ಗಾಂಡೀವ** (ಇದೊಂದು ದೊಡ್ಡ ಬಿಲ್ಲು) ಒಂದು ದೊಡ್ಡ ರಥ **ಹನುಮಂತ**ನೆಂಬ ಕಪಿಯ ಧ್ವಜ ಉಳ್ಳದ್ದು; ಇವುಗಳನ್ನು ಅರ್ಜುನನಿಗೆ ಬಹುಮಾನವಾಗಿ ಕೊಟ್ಟನು. ಶ್ರೀಕೃಷ್ಣನಿಗೆ **ಸುದರ್ಶನ**ವೆಂಬ ಚಕ್ರವನ್ನು ಕೊಟ್ಟು ಅವ ರಿಬ್ಬರನ್ನೂ ಹರಸಿ ಹೊರಟುಹೋದನು.

ಈ ಭಾರತದಲ್ಲಿ ಹದಿನೆಂಟು ಪರ್ವಗಳಿರುವವು, ಪರ್ವಗಳೆಂದರೆ ಭಾಗ ಗಳಿರುವವು. ಇವುಗಳಲ್ಲಿ ಮೊದಲನೆಯದು ಆದಿಪರ್ವ. ಈ ವರೆಗೆ ಹೇಳಿದ ಕಥೆಗಳೆಲ್ಲಾ ಆದಿಪರ್ವಕ್ಕೇನೇ ಸೇರಿದವುಗಳು. ಮುಂದಿನ ಪರ್ವದ ಕಥೆಗಳು ನಾಳೆಯ ಪಾಠದಿಂದ ಬರುವವು.

---

## ಆರನೆಯ ಪಾಠ.

ಮಹಾಭಾರತದಲ್ಲಿ **ಆದಿಪರ್ವ, ಸಭಾಪರ್ವ, ಅರಣ್ಯಪರ್ವ, ವಿರಾಟಪರ್ವ, ಉದ್ಯೋಗಪರ್ವ** ಇವು ಐದೂ ಸೇರಿ ಆದಿ ಪಂಚಕವೆನಿಸಿಕೊಳ್ಳುವುದು. ಇದರಂತೆಯೇ ಯುದ್ಧ ಪಂಚಕಕ್ಕೂ ಐದು ಪರ್ವಗಳು ಸೇರಿರುವವು, ಉಳಿದ ಎಂಟು ಪರ್ವಗಳು ಬೇರೆ. ಈಗ ಸಭಾ ಪರ್ವವನ್ನು ಹೇಳುವೆನು. ಇದರಲ್ಲಿ ಮೂರು ದೊಡ್ಡ ಮಹಾಸಭೆಗಳ ಸುದ್ದಿಯನ್ನು ಹೇಳಿರುವುದರಿಂದ ಇದಕ್ಕೆ **ಸಭಾಪರ್ವ**ವೆಂದು ಹೆಸರು.

ಅರ್ಜುನನು ಖಾಂಡವನವನ್ನು ಸುಟ್ಟಾಗ **ಮಯ**ನೆಂಬ ಹೆಸರಿನ ರಾಕ್ಷಸ ಶಿಲ್ಪಿಯ ಪ್ರಾಣವನ್ನು ಕಾಪಾಡಿದ್ದನು. ಅವನು ಉಪಕಾರವನ್ನು ಮನಸ್ಸಿನಲ್ಲಿಟ್ಟು ಅರ್ಜುನನನ್ನು ನೋಡಿ, ಅಯ್ಯಾ! ಮಹಾತ್ಮನೇ! ನಿನ್ನ ಉಪಕಾರಕ್ಕೆ ಕೃತಜ್ಞನಾಗಿದ್ದೇನೆ. ನಿನಗೆ ಯಾವ ಸಹಾಯ ಬೇಕೋ ತಿಳಿಸಿದರೆ ಮಾಡಿಕೊಡುವೆನು ಎಂದು ಬೇಡಿಕೊಂಡನು. ಆಗ ಅರ್ಜುನನು ಶ್ರೀಕೃಷ್ಣನ ಕಡೆಗೆ ನೋಡಿ ಈತನ ಕೋರಿಕೆಗೆ ತಕ್ಕ ಸಮಾಧಾನ ಹೇಳೆಂದು ಕೇಳಲು ಅವನು **ಮಯ**ನನ್ನು ನೋಡಿ, ಅಯ್ಯಾ! ಶಿಲ್ಪಿಯೇ! ನಿನ್ನ ಬುದ್ಧಿ ಕೌಶಲ್ಯವನ್ನೆಲ್ಲಾ ಖರ್ಚುಮಾಡಿ ಲೋಕೋತ್ತರವಾದ ಒಂದು ದಿವ್ಯ ಸಭೆ ಯನ್ನು ನಿರ್ಮಿಸಿ ಧರ್ಮರಾಯನಿಗೆ ತಂದೊಪ್ಪಿಸೆಂದು ಹೇಳಿದನು. ಮಯನು ಅದಕ್ಕೆ ಒಪ್ಪಿ ಕೈಲಾಸ ಪರ್ವತದ ಕಡೆಯಿಂದ ಅಪೂರ್ವವಾದ ರತ್ನಗಳನ್ನು ತಂದು, ಸುವರ್ಣ ಖಚಿತವಾದ ಸಭಾಮಂಟಪವನ್ನು ನಿರ್ಮಾಣಮಾಡಿ ತಕ್ಕ ಸ್ಥಳಗಳಲ್ಲೆಲ್ಲಾ ನವರತ್ನಗಳನ್ನು ಕೆತ್ತಿ ಅತ್ಯದ್ಭುತ ವಾದ ಒಂದು ಸಭೆಯನ್ನು ನಿರ್ಮಿಸಿ ಯುಧಿಷ್ಠಿರನಿಗೆ ಒಪ್ಪಿಸಿದನು. ಅರ್ಜು

ನನಿಗೆ **ದೇವದತ್ತ**ನೆಂಬ ಹೆಸರಿನ ಒಂದು ಶಂಖವನ್ನು ಕೊಟ್ಟನು. ಶತ್ರು ಗಳನ್ನು ನಾಶಮಾಡುವ ಶಕ್ತಿಯುಳ್ಳ ಗದೆಯೊಂದನ್ನು ತಂದು ಅದನ್ನು ಕೈಯಲ್ಲಿ ಹಿಡಿಯಲು ಮತ್ತಾರೂ ಶಕ್ತರಲ್ಲದ್ದರಿಂದ ಆ ಗದೆಯನ್ನು ಭೀಮ ಸೇನನಿಗೆ ಕೊಟ್ಟನು.

ನಾರದ ಮುನೀಶ್ವರನು ಒಂದು ದಿನ ಆ ಮಹಾಸಭೆಗೆ ಬಂದು ಯುಧಿ ಷ್ಠಿರನಿಂದ ಸನ್ಮಾನವನ್ನು ಹೊಂದಿ ಅವನನ್ನು ನೋಡಿ, ಅಯ್ಯಾ ಪೂರ್ವದಲ್ಲಿ **ನಳ–ನಹುಷ** ಮೊದಲಾದ ಮಹಾರಾಯರೆಲ್ಲಾ ಸ್ವರ್ಗ ಲೋಕದಲ್ಲಿ ಸುಖ ವಾಗಿರುವರು. ನಿಮ್ಮ ತಂದೆಯಾದ ಪಾಂಡುರಾಯನು ಮಾತ್ರ ನರಕದಲ್ಲಿ ಯಾತನೆಯನ್ನು ಅನುಭವಿಸುತ್ತಿರುವನು. ನೀನು ರಾಜರನ್ನೆಲ್ಲಾ ಜಯಿಸಿ ದಿಗ್ವಿಜಯ ಮಾಡಿ ರಾಜಸೂಯ ಯಾಗವನ್ನು ಮುಗಿಸಿದರೆ ಆತನೂ ಇತರ ಚಕ್ರವರ್ತಿಗಳಂತೆ ಸ್ವರ್ಗಸುಖವನ್ನು ಅನುಭವಿಸುವನು ಎಂದು ಹೇಳಲು ಯುಧಿಷ್ಠಿರನು ಅದಕ್ಕೆ ಒಪ್ಪಿ ಯಜ್ಞವನ್ನು ಆರಂಭಿಸಿದನು. ಶ್ರೀಕೃಷ್ಣನು ಸಮ್ಮತಿಸಿ ಬೇಕಾದ ಸಹಾಯಗಳನ್ನು ಮಾಡಿಕೊಟ್ಟನು. ಆಗ ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳಿ ಭೀಮಾರ್ಜುನರನ್ನು ಸಂಗಡ ಕರೆದುಕೊಂಡು **ಮಗಧ ದೇಶಕ್ಕೆ** ಹೋದನು. ಅಲ್ಲಿ **ಜರಾಸಂಧ**ನೆಂಬ ರಾಜನು ಬಹುಮಂದಿ ರಾಜಕುಮಾರರನ್ನು ಹಿಡಿದು ಸೆರೆ ಹಾಕಿ ಬಹು ಶೂರನೆನಿಸಿಕೊಂಡಿದ್ದನು. ಅವನ ಇಷ್ಟದಂತೆ ಭೀಮನು ಅವನ ಸಂಗಡ ಕಾದಿ ಅವನನ್ನು ಕೊಂದು ಬಿಟ್ಟನು. ಬಳಿಕ ಶ್ರೀಕೃಷ್ಣನು ಅವನ ಸೆರೆಯಲ್ಲಿದ್ದ ರಾಜರನ್ನೆಲ್ಲಾ ಬಿಡಿಸಿ ಆ ಜರಾಸಂಧನ ಮಗನಾದ **ಸಹದೇವ**ನಿಗೆ ಪಟ್ಟವನ್ನು ಕಟ್ಟಿ ಭೀಮಾರ್ಜುನ ರನ್ನು ಕರೆದುಕೊಂಡು ಬಂದು ರಾಜಧಾನಿಗೆ ಸೇರಿದನು. ಯಜ್ಞಕ್ಕೆ ಬೇಕಾದ ಹಣವನ್ನು ಒದಗಿಸಿಕೊಂಡು ಬರುವುದಕ್ಕೂ ಗರ್ವದಿಂದ ಕೊಬ್ಬಿದ ರಾಜರ ಸೊಕ್ಕಡಗಿಸುವುದಕ್ಕೂ ಭೀಮಾರ್ಜುನ ಮೊದಲಾದ ನಾಲ್ಕು ಮಂದಿ ಸಹೋದರರು ನಾಲ್ಕು ದಿಕ್ಕುಗಳಿಗೂ ಹೊರಟರು. ಅವರು ತಾವು ಹೋದ ಕಡೆಗಳಲ್ಲೆಲ್ಲಾ ತಮ್ಮ ಶೌರ್ಯದಿಂದ ಪರರಾಜರನ್ನೆಲ್ಲಾ ಗೆದ್ದು ಯಥೇಚ್ಛ ವಾದ ದ್ರವ್ಯವನ್ನು ಸಂಪಾದಿಸಿಕೊಂಡು ಬಂದು ಅಣ್ಣನಿಗೆ ಒಪ್ಪಿಸಿದರು.

ಗೊತ್ತಾದ ಮುಹೂರ್ತದಲ್ಲಿ ಯಾಗವು ಆರಂಭವಾಯಿತು. ಭೂಮಿಯ ಮೇಲಿದ್ದ ರಾಜರಿಗೆಲ್ಲಾ ಲಗ್ನಪತ್ರಿಕೆಗಳು ಹೊರಟವು. ಎಲ್ಲಾ ರಾಜರುಗಳೂ ಬಂದರು. ಬ್ರಾಹ್ಮಣಾದಿ ಸಮಸ್ತ ಜಾತಿಯ ಜನರೂ ಬಂದು ತಮಗೆ ತಕ್ಕ ಸ್ಥಳಗಳಲ್ಲಿ ಇಳಿದುಕೊಂಡರು. ಆ ಯಾಗದಲ್ಲಿ ಬಂದ ಬ್ರಾಹ್ಮಣರಿಗೆ ದಾನಧರ್ಮಗಳನ್ನು ಕೊಡಲು ಕೌರವರಾಯನನ್ನೇ ಕೋಶಾಧಿಕಾರಿಯಾಗಿ ಇಟ್ಟರು, ದುಶ್ಶಾಸನನಿಗೆ ಭೋಜನ ಸಾಮಗ್ರಿಗಳ ಅಧಿಕಾರವನ್ನು ಒಪ್ಪಿಸಿದರು, ಬ್ರಾಹ್ಮಣರನ್ನು ಪ್ರೀತಿಪೂರ್ವಕವಾಗಿ ಬರಮಾಡಿಕೊಂಡು ಸತ್ಕರಿಸಲು **ಅಶ್ವತ್ಥಾಮನು** ನಿಂತನು. ಈ ರೀತಿಯಲ್ಲಿ ಒಬ್ಬೊಬ್ಬರು ಒಂದೊಂದು ಕೆಲಸದಲ್ಲಿ ನಿರ್ಮಿಸಿದ್ದರಿಂದ ಆಕ್ಷೇಪವಿಲ್ಲದೆ ಯಜ್ಞಕಾರ್ಯಗಳೆಲ್ಲಾ ನೆರವೇರಿದುವು. ಯಾಗವು ಮುಗಿದ ಮೇಲೆ ಅರ್ಘ್ಯವನ್ನು ಕೊಡಬೇಕು. ಈಗಿನ ಕಾಲದಲ್ಲಿ ಉತ್ಸವ ಕಾಲಗಳಲ್ಲಿ, ಮದುವೆ ಮುಂತಾದ ಸಂದರ್ಭಗಳಲ್ಲಿ ತಾಂಬೂಲ ಕೊಡುವಂತೆ ಪೂರ್ವದಲ್ಲಿ ಯೋಗ್ಯನಾದವನಿಗೆ ಮೊದಲು ಕಾಲು ಕೈಗಳನ್ನು ತೊಳೆದು ಸತ್ಕಾರ ಮಾಡಿ ಪೂಜಿಸಿದ ಮೇಲೆ ಉಳಿದವರಿಗೆ ಅರ್ಘ್ಯ ಕೊಡುವ ಪದ್ಧತಿಯಿತ್ತು. ಆ ವೇಳೆಯಲ್ಲಿ ಮೊದಲು ಯಾರಿಗೆ ಅರ್ಘ್ಯ ಕೊಡಬೇಕೆಂದು ಜ್ಞಾನವೃದ್ಧನಾಗಿಯೂ, ವಯೋವೃದ್ಧನಾಗಿಯೂ ಇದ್ದ ಭೀಷ್ಮನನ್ನು ಯುಧಿಷ್ಠಿರನು ಕೇಳಿದನು. ಆಗಲಾತನು ಅಯ್ಯಾ! ರಾಜನೇ ಈ ಸಮಸ್ತ ಲೋಕಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಕರ್ತನಾದ ಪರಮಾತ್ಮನೇ ಧರ್ಮಸಂಸ್ಥಾಪನೆಗಾಗಿ ಈ ಲೋಕದಲ್ಲಿ ಅವತರಿಸಿರುವುದರಿಂದ ಈ ಮಹಾ ಮಹಿಮನಿಗೇನೇ ಮೊಧಲು ಅರ್ಘ್ಯವನ್ನು ಕೊಡಬೇಕೆಂದು ಹೇಳಿದನು. ಆಗ ಯುಧಿಷ್ಠಿರನು ಆತನ ಅಪ್ಪಣೆಯಂತೆ ಒಪ್ಪಿದನು, ಎಲ್ಲರೂ ಸಮ್ಮತಿಸಿದರು. ಸಹದೇವನು ಶ್ರೀಕೃಷ್ಣನನ್ನು ಸತ್ಕರಿಸಿ ತಾಂಬೂಲವನ್ನು ಕೊಟ್ಟನು. **ಶಿಶುಪಾಲ**ನಿಗೆ ತನ್ನ ಮಾತು ನಡೆಯಲಿಲ್ಲವೆಂದು ಬಹು ಕೋಪಬಂದಿತು. ಅವನು ಭೀಷ್ಮನನ್ನೂ ಧರ್ಮರಾಯನನ್ನೂ ಬಹಳವಾಗಿ ನಿಂದಿಸಿದನು. ಶ್ರೀಕೃಷ್ಣನನ್ನು ಹೀನಕುಲದವನೆಂತಲೂ, ಬೆಣ್ಣೆಗಳ್ಳನೆಂತಲೂ, ಹಾದರಿಗನೆಂತಲೂ,

ಮೋಸಗಾರನೆಂತಲೂ ಹಲವು ಬಗೆಯಿಂದ ದೂರಿದನು. ಬೈದನು. ಶ್ರೀ ಕೃಷ್ಣನು ಇವುಗಳನ್ನೆಲ್ಲಾ ಸೈರಿಸಿಕೊಂಡಿದ್ದನು. ನೂರು ತಪ್ಪುಗಳಾದ ಮೇಲೆ ಪುನಃ ಹಿಂದಿನಂತೆ ಶತ್ರುವು ದೂರಲಿಕ್ಕೆ ತೊಡಗಿದನು. ಆಗ ಕೃಷ್ಣನು ಕೋಪಗೊಂಡು ಅವನನ್ನು ದಂಡಿಸಲಿಕ್ಕೆ ತನ್ನ ಚಕ್ರಾಯುಧವನ್ನು ಪ್ರಯೋಗಿಸಿದನು. ಅದು ಅವನ ಕಂಠವನ್ನು ಕತ್ತರಿಸಿ ಕೊಂದುಹಾಕಿತು. ಅವನ ಮಗನಿಗೇನೇ ಅವನ ರಾಜ್ಯದ ಪಟ್ಟಾಭಿಷೇಕವನ್ನು ಮಾಡಿಸಿ ಯಜ್ಞದ ಕಾರ್ಯವನ್ನು ಮುಗಿಸಿದರು. ಬಂದಿದ್ದ ರಾಜರೆಲ್ಲಾ ತಮ್ಮ ತಮ್ಮ ದೇಶಗಳಿಗೆ ಹೋದರು. ದುರ್ಯೋಧನನು ಮಾತ್ರ ಯುಧಿಷ್ಠಿರನ ಆತಿಥ್ಯದಲ್ಲಿ ಇನ್ನೂ ಕೆಲವು ದಿನಗಳಿರಬೇಕೆಂದು ಪ್ರಾರ್ಥಿಸಲ್ಪಟ್ಟವನಾಗಿ ಅಲ್ಲಿಯೇ ವಾಸಮಾಡುತ್ತಾ ಇದ್ದನು.

ಒಂದು ದಿನ ಅವನು ಮಯನಿಂದ ನಿರ್ಮಿಸಲ್ಪಟ್ಟ ಸಭಾಮಂಟಪವನ್ನು ನೋಡಲಿಕ್ಕೆ ಹೋದನು. ಅಂತಹ ಸಭೆಯನ್ನು ಅವನು ಎಂದೂ ನೋಡಿದವನಲ್ಲ. ಅದನ್ನು ಕಂಡಕೂಡಲೇ ಅವನಿಗೆ ಬಹು ಹೊಟ್ಟೆಕಿಚ್ಚೂ ತನ್ನಲ್ಲಿ ಅಂತದಿಲ್ಲವೆಂಬ ಚಿಂತೆಯೂ ಉಂಟಾದುವು. ಆ ಮಂಟಪದಲ್ಲಿ ಒಂದು ಕಡೆ ಸ್ಫಟಿಕ ಶಿಲೆ ಹಾಸಿರುವಂತೆ ಕಾಣಬರಲು ಅದರ ಮೇಲೆ ಕುಳಿತುಕೊಳ್ಳಲಿಕ್ಕೆ ಹೋದನು. ಅದು ಸ್ಫಟಿಕ ಶಿಲೆ ಹಲಿಗೆಯಲ್ಲ. ಒಂದು ಸಣ್ಣ ಸರೋವರ, ಅಲ್ಲಿ ಕುಳಿತ ಕೂಡಲೇ ಅವನ ಬಟ್ಟೆಗಳೆಲ್ಲಾ ನೆನೆದು ಒದ್ದೆ ಮುದ್ದೆಯಾಯಿತು. ಮತ್ತೊಂದು ಕಡೆ ನೀರು ಹರಿಯುತ್ತಿರುವಂತೆ ಕಾಣಬಂದಿತು. ತನ್ನ ವಸ್ತ್ರವು ನೆನೆದು ಹೋಗುವುದೆಂಬ ಭಯದಿಂದ ಅವನು ಭ್ರಾಂತನಾಗಿ ಅವು ತೋಯದ ಹಾಗೆ ಮೊಳಕಾಲಿನ ತನಕ ಪಂಚೆಗಳನ್ನು ಎತ್ತಿ ಹಿಡಿದು ನಡೆಯತೊಡಗಿದನು. ಅದು ನೀರಲ್ಲ, ನಿರ್ಮಲವಾದ ಸ್ಫಟಿಕ ಶಿಲೆಯ ನೆಲ. ಹೀಗೆಯೇ ಆ ಸಭೆಯಲ್ಲಿ ತಿರುಗುವಾಗಲೆಲ್ಲಾ ಅವನು ಭ್ರಾಂತಿಯಿಂದ ಮೋಸಹೋಗಿ ಜನರ ಹಾಸ್ಯಕ್ಕೆ ಗುರಿಯಾದನು. ಇದನ್ನು ಕಂಡು ದ್ರೌಪದಿಯೂ ಭೀಮಸೇನನೂ ಆ ಪಾಂಡವರ ಕಡೆ ಪರಿವಾರದವರೂ ನಗಲಾರಂಭಿಸಿದರು. ಇದನ್ನು ಕಂಡು ದುರ್ಯೋಧನನಿಗೆ ಬಹಳ

ಅವಮಾನವಾಯಿತು. ನಾಚಿಕೆಯಿಂದ ತಲೆತಗ್ಗಿಸಿಕೊಂಡು ಅಣ್ಣನ ಅಪ್ಪಣೆ ಪಡೆದು ಅಲ್ಲಿಂದ ಹೊರಟು ತನ್ನ ಪಟ್ಟಣದ ಕಡೆಗೆ ತಿರುಗಿದನು. ಅವನು ತನ್ನ ಮನಸ್ಸಿನಲ್ಲಿ ಹೇಗೆಯೋ ಆಗಲಿ, ಈ ಪಾಂಡವರ ಸೊಕ್ಕನ್ನು ಅಡಗಿಸ ಬೇಕು, ಅಥವಾ ನಾನು ಪ್ರಾಣಗಳನ್ನು ತೊರೆಯಬೇಕು ಎಂದು ನಿಶ್ಚಯಿಸಿ ಕೊಂಡನು. ಪಾಂಡವರನ್ನು ಗೆಲ್ಲಬೇಕೆಂದರೆ ಬರಿಯ ಮಾತೇ? ಅವರು ಒಳ್ಳೇ ಬಲಶಾಲಿಗಳು, ಶಕ್ತಿ ಸಾಹಸಗಳಲ್ಲಿ ಅವರನ್ನು ಮೀರಿದವರು ಒಬ್ಬ ರಾದರೂ ಇಲ್ಲ. ಏನಾದರೂ ಒಂದು ಕಪಟೋಪಾಯದಿಂದ ಇವರನ್ನು ವಂಚಿಸಬೇಕೇ ಹೊರತು ಬೇರೆ ಉಪಾಯವಿಲ್ಲ ಎಂದು ಯೋಚಿಸಿ ಅಲ್ಲಿಂದ ಹಸ್ತಿನಾವತಿಗೆ ಹೋಗಿ ಸೇರಿದನು. ತನ್ನ ಸೋದರ ಮಾವನಾದ **ಶಕುನಿ** ಯನ್ನು ಬರಮಾಡಿಕೊಂಡನು. ತನಗಾದ ಅವಮಾನಗಳೆಲ್ಲಾ ಹೇಳಿ ಕೊಂಡು ಇನ್ನು ನಾನು ಪ್ರಾಣಗಳನ್ನಿಟ್ಟುಕೊಂಡಿರಲೊಲ್ಲೆನು. ಪಾಂಡವ ರನ್ನು ನನ್ನ ಸ್ವಾಧೀನಮಾಡುವೆನೆಂದು ನೀನು ವಾಗ್ದಾನ ಮಾಡಿದರೆ ಜೀವ ದಿಂದಿರುವೆನು, ಇಲ್ಲದಿದ್ದರೆ ಅನಶನ ವ್ರತದಿಂದ ಈ ಪ್ರಾಣಗಳನ್ನು ಬಿಡು ವೆನು ಎಂದು ಅವನ ಕಾಲಿನ ಮೇಲೆ ಬಿದ್ದು ಹೊರಳಾಡಿದನು.

---

## ಏಳನೆಯ ಪಾಠ.

ಆಗ ಶಕುನಿಯು ಕುರುಪತಿಯನ್ನು ನೋಡಿ "ಮಗೂ! ಇಷ್ಟು ಮಾತ್ರ ಕ್ಕೇನೇ ನೀನು ಚಿಂತಿಸಬೇಕೇ? ಹೆಂಗಸಿನಂತೆ ಅಂಜುಪುರುಕಿಯಾಗಿ ಪ್ರಾಣಗಳನ್ನು ಬಿಡುವೆನೆಂದು ಹೇಳುತ್ತೀಯೇ! ನೀನೇನು? ಕೈಗಳಿಗೆ ಬಳೆಗ ಳನ್ನು ತೊಟ್ಟುಕೊಂಡಿರುವಿಯಾ? ಪಾಂಡವರಿಗಿಂತ ಬಲವತ್ತರವಾದ ವೀರರು ನಮ್ಮ ಸೇನೆಯಲ್ಲಿಲ್ಲವೇ? **ಕರ್ಣ, ಸೈಂಧವ, ದುಶ್ಶಾಸನ, ಭೀಷ್ಮ, ದ್ರೋಣ** ಮೊದಲಾದ ಸೇನಾಪತಿಗಳು ಎಂಥಹ ಘೋರ ಯುದ್ಧದಲ್ಲಿಯಾ ದರೂ ಜಯಿಸಿ ಕೀರ್ತಿಯನ್ನು ಪಡೆಯಬಲ್ಲರು. ಅಂಥವರ ಸಹಾಯವಿರು ವಾಗ ನೀನೇಕೆ ಹೆದರಬೇಕು? ಆ ಪಾಂಡವರನ್ನು ನಿನ್ನ ಸ್ವಾಧೀನ ಮಾಡಿ

ನೀನು ಆಡಿಸಿದಂತೆ ಕುಣಿಯುವ ಹಾಗೆ ಮಾಡುವೆನು, ನನ್ನ ಸಾಹಸವನ್ನು ನೋಡು'' ಎಂದು ಹೇಳಿದನು.

ಈ ಶಕುನಿ ಮಾವನು ಕಪಟ ಜೂಜಾಡುವುದರಲ್ಲಿ ಒಳ್ಳೆಯ ಚತುರನು. **ನಿಜವಾದ ಕ್ಷತ್ರಿಯನು ಯಾರಾದರೂ ಜೂಜಿಗೆ ಬಾರೆಂತ ಕರೆದರೆ ತಿರಸ್ಕರಿಸದೆ ಹೋಗಿ ಆಟಕ್ಕೆ ಕುಳಿತುಕೊಳ್ಳಬೇಕು.** ಹಾಗೆ ಹೋಗದೆ ತಿರಸ್ಕರಿಸಿದರೆ ಅವನು ಸೋತುಹೋದನೆಂತಲೇ ತಿಳಿಯತಕ್ಕದ್ದು. ಧರ್ಮರಾಯನಿಗೆ ಕೂಡಾ ಜೂಜಾಡುವುದರಲ್ಲಿ ಬಹು ಆಶೆ. ಯಾರಾದರೂ ಅವನನ್ನು ಆಟಕ್ಕೆ ಕರೆದರೆ ಒಲ್ಲೆನೆನ್ನುತ್ತಿರಲಿಲ್ಲ. ಶಕುನಿಗೆ ಈ ವಿಷಯ ಗೊತ್ತುಂಟು. ಆದುದರಿಂದ ಅವನು ಜೂಜಾಡುವುದಕ್ಕೆ ಯುಧಿಷ್ಠಿರನನ್ನು ಕರೆಸೆಂದು ದುರ್ಯೋಧನನಿಗೆ ಹೇಳಿದನು. ಅವನು ತನ್ನ ತಂದೆಗೆ ಹೇಳಿ ಆತನನ್ನು ಕರೆಸಿಕೊಡೆಂದು ಬೇಡಿದನು. ಆದರೆ ತನ್ನ ದುರುದ್ದೇಶವನ್ನು ಮಾತ್ರ ತಿಳಿಸಲಿಲ್ಲ. ಧೃತರಾಷ್ಟ್ರನು ಸ್ವತಃ ಯಾವ ಕೆಲಸವನ್ನೂ ಮಾಡಲಿಕ್ಕೆ ಹೆದರುತ್ತಲಿದ್ದನು. ಅವನು ವಿದುರನನ್ನು ಕೇಳಿ ಕಾರ್ಯವನ್ನು ಆರಂಭಿಸುವ ಅಭ್ಯಾಸವಾಗಿತ್ತು. ಆ ವೇಳೆಯಲ್ಲಿ ವಿದುರನನ್ನು ಕರೆಸಿ ತನ್ನ ಮಗನ ಬಯಕೆಯನ್ನು ತಿಳಿಸಿದನು. ವಿದುರನು ಆಲೋಚನೆ ಮಾಡಿ ಜೂಜಿನಿಂದ ಉಂಟಾಗುವ ಕೇಡುಗಳನ್ನೂ ಮನಃಕಷಾಯಗಳನ್ನೂ ಪರಸ್ಪರ ದ್ವೇಷಾಸೂಯೆಗಳು ಹೆಚ್ಚುವುದನ್ನೂ ತಿಳಿಸಿ ಈ ದ್ಯೂತಕ್ಕೆ ಅನುಮತಿ ಕೊಡಬೇಡವೆಂದು ತಡೆದುಬಿಟ್ಟನು.

ದುರ್ಯೋಧನನಿಗೆ ಈ ಮಾತು ಸರಿಬೀಳಲಿಲ್ಲ. ಹೇಗಾದರೂ ಮಾಡಿ ತನ್ನ ಕಾರ್ಯಸಾಧನೆಯನ್ನು ಮಾಡಬೇಕೆಂತಲೇ ಹಟ ಹಿಡಿದನು. ಅಂಧ ರಾಜನಿಗೆ ಯತ್ನವಿಲ್ಲದೆ ಬಂತು. ಯುಧಿಷ್ಠಿರನನ್ನು ಕರೆಯಿಸಿ ವಿನೋದಕ್ಕಾಗಿ ಒಂದೆರಡು ಆಟಗಳನ್ನು ಆಡಿರೆಂದು ಪ್ರೋತ್ಸಾಹಗೊಳಿಸಿದನು. ಅವನು ಹಿರಿಯರಾಜ್ಞೆಯನ್ನು ಮೀರಬಾರದೆಂದು ಜೂಜಿಗೆ ಒಪ್ಪಿಕೊಂಡು ಕುಳಿತನು ದುರ್ಯೋಧನನಿಗೆ ಪ್ರತಿಯಾಗಿ ಶಕುನಿ ಮಾವನೇ ಕುಳಿತು ದಾಳಗಳನ್ನು ಹಾಕುತ್ತಾ ಬಂದನು. ಯುಧಿಷ್ಠಿರನು ಆಟಕ್ಕೆ ಕುಳಿತ ಮೊದಲು ಪ್ರತಿ

ಯೊಂದು ಸಾರಿಯೂ ಸೋತು ಹೋಗುತ್ತಲೇ ಬಂದನು. ರಾಜ್ಯವು ಹೋಯಿತು, ದಾಸದಾಸೀ ಜನಗಳು ಸೋತು ಹೋದರು, ತಮ್ಮಂದಿರನ್ನು ಸೋತನು, ತನ್ನನ್ನೇ ಪಣವಾಗಿ ಒಡ್ಡಿ ಆ ಆಟವನ್ನೂ ಸೋತನು, ಮುಂದೆ ಮಾಡತಕ್ಕದ್ದೇನು? ಆಟ ಮುಗಿದಿಲ್ಲ; ಮುಂದೆ ಇಡಲಿಕ್ಕೆ ಯಾವ ಆಸ್ತಿಯೂ ಇಲ್ಲ; ದ್ರೌಪದಿಯು ಒಬ್ಬಳು ಮಾತ್ರ ಮಿಕ್ಕಿರುವಳು; ಇದೇ ಕೊನೆಯ ಆಟ; ಇದಕ್ಕೆ ಈಕೆಯನ್ನೊಡ್ಡುವೆನು; ಇದರಲ್ಲಿ ಗೆದ್ದರೆ ಹಿಂದೆ ನಾನು ಸೋತ ವಸ್ತುಗಳನ್ನೆಲ್ಲಾ ಪಡೆದುಕೊಳ್ಳುವೆನು. ದುರದೃಷ್ಟದಿಂದ ಸೋತು ಹೋದರೆ ಒಂದಾದರೂ ನನಗೆ ಬೇಡ ಎಂದು ನಿಶ್ಚೈಸಿದನು.

ದಾಳ ಹಾಕಿದನು. ಆ ಸಾರಿ ಕೂಡ ದೈವಾನುಗ್ರಹ ಉಂಟಾಗಲಿಲ್ಲ. ಅಯ್ಯೋ! ಮಾಡತಕ್ಕದ್ದೇನು? **ದೈವವು ದುರ್ಬಲವಾಗಿದ್ದಾಗ ಎಂಥವನಿಗಾಗಲಿ ಬುದ್ಧಿಯೇ ಓಡುವುದಿಲ್ಲ. ಶಕ್ತಿಸಾಹಸಗಳೆಲ್ಲಾ ನಿಷ್ಫಲಗಳಾಗಿ ಹೋಗುವುವು. ಮಾಡಿದ ಪ್ರಯತ್ನಗಳೆಲ್ಲಾ ವ್ಯರ್ಥವಾಗುವುವು. ಇದರಿಂದ ಪೌರುಷವು ಕಾರ್ಯಕಾರಿಯಲ್ಲವೆಂದು ತಿಳಿಯಬೇಕಾಗಿದೆ.** ಜೂಜಾಟ ಮುಗಿಯಿತು. ಪಾಂಡವರೆಲ್ಲರೂ ದ್ರೌಪದಿಯೊಂದಿಗೆ ಕೌರವರಿಗೆ ದಾಸರಾದರು. ಬಳಿಕ ದುರ್ಯೋಧನನು ಒಬ್ಬ ಸೇವಕನನ್ನು ಕಳಿಸಿ ಅವಳನ್ನು ಈ ದರ್ಬಾರಿಗೆ ಈಗಲೇ ಕರೆದು ತರಬೇಕೆಂದು ಆಜ್ಞಾಪಿಸಿದನು. ಅವನು ಹೋಗಿ ಕರೆದನು ಆಕೆ ಬರಲಿಲ್ಲ ಆಗ ದುರ್ಯೋಧನನು ತನ್ನ ತಮ್ಮನಾದ ದುಶ್ಶಾಸನನನ್ನು ಕಳುಹಿ ಆ ತೊತ್ತಿನ ತುರುಬು ಹಿಡಿದು ಇಲ್ಲಿಗೆ ಎಳೆದುಕೊಂಡು ಬಾ. ಅವಳು ಉಟ್ಟಿದ್ದ ಸೀರೆಯನ್ನು ಬಿಚ್ಚಿ ಹಾಕಿ ಮಾನಭಂಗಮಾಡು ಎಂದಾಜ್ಞಾಪಿಸಿದನು. ದುಶ್ಶಾಸನನು ದ್ರೌಪದಿಯಿದ್ದ ಅಂತಃಪುರಕ್ಕೆ ಹೋಗಿ ಆಕೆಯ ತುರುಬು ಹಿಡಿದು ಈಚೆಗೆ ಎಳೆದುತಂದನು. ಪತಿವ್ರತೆಯಾದ ಆ ದೇವಿಯು ದುಃಖದಿಂದ ಗೋಳಾಡುತಿದ್ದಳು. ತುಂಬಿದ ಸಭೆಯಲ್ಲಿ ಭೀಷ್ಮದ್ರೋಣಾದಿ ಹಿರಿಯರೆಲ್ಲರೂ ಕುಳಿತಿದ್ದರು. ತನ್ನ ಪತಿಗಳೈದು ಮಂದಿ ಇದ್ದರು ಒಬ್ಬರಾದರೂ ಆಕೆಯ ಪಕ್ಷವಾಗಿ ಮಾತನಾಡಲಿಲ್ಲ. ಎಲ್ಲರೂ ಸುಮ್ಮನೆ ನೋಡುತ್ತ

ಲಿದ್ದರು. ಅವಳು ಒಂದು ಸೀರೆಯನ್ನು ಮಾತ್ರ ಉಟ್ಟಿದ್ದಳು. ದುಶ್ಶಾಸನನು ಅದನ್ನು ಬಿಚ್ಚಲಿಕ್ಕೆ ತೊಡಗಿದನು. ಆಗಲಾಕೆಯು ಈ ಸಭೆಯಲ್ಲಿ ತನ್ನ ಮಾನವನ್ನು ಕಾಪಾಡತಕ್ಕವರು ಒಬ್ಬರೂ ಇಲ್ಲವೆಂದು ತಿಳಿದು ತನ್ನ ಮನಸ್ಸಿನಲ್ಲಿ ಶ್ರೀಕೃಷ್ಣಪರಮಾತ್ಮನನ್ನು ಧ್ಯಾನಮಾಡಿದಳು.

ಎಲೈ ಆಪದ್ಬಾಂಧವ! ದೀನದಯಾಳುವೆ! ನಾನು ಏನು ಅನ್ಯಾಯ ಮಾಡಿದೆ? ಈ ನೀಚರು ತಪ್ಪು ಮಾಡದೆ ಇರುವ ನನ್ನನ್ನು ಅವಮಾನಗೊಳಿಸಿ ನನ್ನ ಪಾತಿವ್ರತ್ಯವನ್ನು ಕೆಡಿಸುವರಲ್ಲ! ಈ ಕಷ್ಟ ಕಾಲದಲ್ಲಿ ನನ್ನನ್ನು ಸಲಹ ಬಲ್ಲವರು ನಿನ್ನ ಹೊರತು ಮತ್ಯಾರೂ ಇಲ್ಲ. ಬೇಗ ಬಂದು ನನ್ನನ್ನು ರಕ್ಷಿಸು. ಸಾವಕಾಶಮಾಡಿದರೆ ಪ್ರಾಣಗಳನ್ನು ಬಿಟ್ಟುಬಿಡುವೆನು ಎಂದು ಕಣ್ಣುಗಳನ್ನು ಮುಚ್ಚಿಕೊಂಡಳು. ದೇವರನ್ನು ದೃಢಭಕ್ತಿಯಿಂದ ಧ್ಯಾನಿಸಿದಳು.

ಆ ವೇಳೆಯಲ್ಲಿ ಶ್ರೀಕೃಷ್ಣನು **ದ್ವಾರಕಾ ಪಟ್ಟ**ಣದಲ್ಲಿದ್ದನು. ಆಪದುದ್ಧಾರಕನೆಂದರೆ ಆತನೇ ಸರಿ. ನಂಬಿದವರನ್ನೆಂದಿಗೂ ಕೈಬಿಡತಕ್ಕವನಲ್ಲ! ಪತಿವ್ರತೆಯಾದ ದ್ರೌಪದಿಯನ್ನು ಆ ದುಷ್ಟರು ಅವಮಾನಪಡಿಸುತ್ತಿರುವರೆಂದು ತಿಳಿದುಕೊಂಡನು. ಸರ್ವಜ್ಞನಾಗಿಯೂ, ಸರ್ವಸಾಕ್ಷಿಯಾಗಿಯೂ ಇರುವ ಆ ಪರಬ್ರಹ್ಮನಿಗೆ ತಿಳಿಯದೆ ಇರುವ ವಿಷಯವುಂಟೇ? ದ್ರೌಪದಿಯ ಸೀರೆಯು **ಅಕ್ಷಯವಾಗಲಿ** ಎಂದು ಹರಸಿದನು. ದುಶ್ಶಾಸನನು ಒಂದು ಸೀರೆಯನ್ನು ಬಿಚ್ಚಿ ಬಿಸುಟನು. ಆ ತಾಯಿಯ ಮೈಮೇಲೆ ಮತ್ತೊಂದು ಸೀರೆ ಇದ್ದೇ ಇದೆ. ಅದನ್ನು ಕಿತ್ತು ಒಗೆದನು. ಇನ್ನೊಂದು ಸೀರೆ ಉಟ್ಟೇ ಇದ್ದಾಳೆ. ಅದನ್ನೂ ಸೆಳೆದುಹಾಕಿದನು. ಮತ್ತೊಂದು ಸಿದ್ಧವಾಗಿಯೇ ಇದೆ. ಹೀಗೆ ಸಾವಿರಾರು ಸಾರಿ ಸೀರೆಗಳನ್ನು ಸೆಳೆದು ಸೆಳೆದು ಹಾಕಿ ಅವನ ಕೈಗಳು ಸೋತುಹೋದುವು. ಆಯಾಸದಿಂದ ಅವನು ಮುಂದೆ ಸೀರೆಗಳನ್ನು ಸುಲಿಯಲಾರದೆ ಸೋತು ಬಿದ್ದುಬಿಟ್ಟನು. ದ್ರೌಪದಿಯ ಮಾನವು ಕಾಪಾಡಲ್ಪಟ್ಟಿತು. ದುರ್ಯೋಧನನು ಅದನ್ನು ಕಂಡು ನಾಚಿಕೊಂಡು, ಎಲಾ! ಇವಳು ಮಾಯಗಾರೆ. ಈ ಅಮೂಲ್ಯಗಳಾದ ವಸ್ತ್ರಗಳನ್ನು ತೆಗೆಸಿ

ಖಜಾನೆಯಲ್ಲಿರಿಸೆಂದು ಆಜ್ಞಾಪಿಸಿದನು. ಕೂಡಲೇ ಆಕೆ ಕಣ್ಣುತೆರೆದು ನೋಡಿದಳು. ಸೀರೆಯ ರಾಶಿಗಳೆಲ್ಲಾ ಉರಿದು ಬೂದಿಯಾದವು.

ಇಂಥಾ ಕ್ರೂರಕೃತ್ಯಗಳು ಸಭೆಯಲ್ಲಿ ನಡೆಯುತ್ತಿದ್ದಾಗ ಪಾಂಡವರು ಎಷ್ಟು ಶಕ್ತರಾಗಿದ್ದರೂ ಏನೂ ಮಾಡಲಾರದೆ ಹೋದರು. ಅವರು ಸತ್ತ ಹೆಣಗಳಂತೆ ಬಿದ್ದಿದ್ದರು. ಅವರೂ ಕೌರವರಿಗೆ ದಾಸರೇ. ಆದ್ದರಿಂದ ಅವರಿಗೆ ಸ್ವಾತಂತ್ರ್ಯವಿರಲಿಲ್ಲ. ಅವರು ತಮ್ಮತಮ್ಮಷ್ಟಕ್ಕೆ ಏನೇನೋ ಪ್ರತಿಜ್ಞೆ ಮಾಡಿದರು. ಸಭೆಯಲ್ಲಿ ಇಂತಹ ಕ್ರೂರಕೃತ್ಯಗಳು ನಡೆಯುತ್ತಿರುವಾಗ ಪಟ್ಟಣದಲ್ಲಿ ಒಂದು ಕಡೆ ಬೆಂಕಿ ಹೊತ್ತಿಕೊಂಡಿತು. ಊರೆಲ್ಲಾ ಸುಡುತ್ತ ಬಂದಿತು. ಮಹಾರಾಣಿಯಾದ **ಗಾಂಧಾರಿ**ದೇವಿಯ ಕಿವಿಗೆ ಈ ಸುದ್ದಿ ಬಿತ್ತು. ಇನ್ನು ವಿನಾಶಕಾಲ ಬಂದಿತೆಂದು ತಿಳಿದು ಆಕೆಯು ತನ್ನ ಗಂಡನ ಬಳಿಗೆ ಹೋಗಿ ಪಾಂಡವರನ್ನೂ ದ್ರೌಪದಿಯನ್ನೂ ದಾಸ್ಯದಿಂದ ಬಿಡಿಸಿ ಸ್ವತಂತ್ರರಾಗಿ ಬಿಟ್ಟುಬಿಡಿರೆಂದು ಬೇಡಿಕೊಂಡಳು. ಬಳಿಕ ಅವರೆಲ್ಲಾ ತಮ್ಮ ರಾಜಧಾನಿಯಾದ **ಇಂದ್ರಪ್ರಸ್ಥ**ದ ಕಡೆಗೆ ಪ್ರಯಾಣವಾಗಿ ಹೊರಟು ಹೋಗುತ್ತಿದ್ದರು.

ಶಕುನಿ, ದುರ್ಯೋಧನನು, ಕರ್ಣನು ಇವರು ಕೂಡಿ ಆಲೋಚಿಸಿ ಧೃತರಾಷ್ಟ್ರರಾಯನ ಬಳಿಗೆ ಹೋಗಿ ಕೈಮುಗಿದು ಮಹಾರಾಜನೆ, ಹಸಿದ ಹುಲಿಗಳಂತೆ ಅತಿ ಕೋಪದಿಂದ ಹೋಗುತ್ತಿರುವ ಪಾಂಡವರನ್ನು ಹಾಗೆಯೇ ಬಿಟ್ಟುಬಿಟ್ಟರೆ ಲೋಕವನ್ನೇ ಸುಟ್ಟುಬಿಡುವರು. ಆದ್ದರಿಂದ ಅವರನ್ನು ಸಮಾಧಾನಮಾಡಿ ಕಳುಹಿಸಬೇಕಾಗಿದೆ. ಅವರನ್ನು ಕರೆಸಿಕೊಡು. ನಾವು ಇನ್ನೊಂದಾಟ ಆಡುವುದಕ್ಕೆ ಮಾತ್ರ ಅವಕಾಶ ಕೊಡಿಸು ಎಂದು ಬಹಳವಾಗಿ ಬೇಡಿಕೊಂಡರು. ಈ ಸಾರಿ ಆಟದಲ್ಲಿ ಪಣವೇನೂ ಇಲ್ಲ. ಯಾರು ಸೋತುಹೋಗುವರೊ ಅವರು ತಮ್ಮ ರಾಜ್ಯಭಾರವನ್ನು ಬಿಟ್ಟುಬಿಟ್ಟು ಕಾಡಿಗೆ ಹೊರಟುಹೋಗಬೇಕು. ಹನ್ನೆರಡು ವರ್ಷಗಳ ಕಾಲ ಅಲ್ಲಿಯೇ ತಿರುಗಾಡುತ್ತಾ ಇದ್ದು ಹದಿಮೂರನೇ ವರ್ಷದಲ್ಲಿ ಯಾವದಾದರೂ ಒಂದು ರಾಜ್ಯಕ್ಕೆ ಹೋಗಿ ಆ ರಾಜನ ಬಳಿಯಲ್ಲಿ ಸೇವಾವೃತ್ತಿ ಮಾಡತಕ್ಕದ್ದು.

ಚಾಕರಿ ಮಾಡಿಕೊಂಡಿರುವಾಗ ತಮ್ಮ ಹೆಸರಾಗಲಿ ರೂಪವಾಗಲಿ ಇತರರಿಗೆ ತಿಳಿಯಕೂಡದು. ಅಜ್ಞಾತವಾಸದಲ್ಲಿರುವಾಗ ಅವನು ಇಂಥವನೆಂದು ಪ್ರತ್ಯಕ್ಷವಾಗಿ ತಿಳಿದುಹೋದರೆ ಮರಳಿ ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಮಾಡಬೇಕು. ಇದೇ ಈಗಿನ ಆಟದ ಪಣವು. ಇದರಿಂದ ಯಾರಿಗೂ ಕ್ರೋಧವಾಗಲಿ ಹೊಟ್ಟೆಕಿಚ್ಚಾಗಲಿ ಇಲ್ಲ. ದಯಮಾಡಿ ಅಪ್ಪಣೆಕೊಡು ಎಂದು ಪ್ರಾರ್ಥಿಸಿದರು.

ಆಗ ಧೃತರಾಷ್ಟ್ರನಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಆ ದುರ್ಮಂತ್ರಿಗಳ ಮಾತಿಗೆ ಒಡಂಬಡಬೇಕಾಯಿತು. ವಿದುರನನ್ನೇ ಕಳುಹಿಸಿ ತಮ್ಮ ರಾಜಧಾನಿಯ ಕಡೆಗೆ ಹೋಗುತ್ತಿರುವ ಪಾಂಡವರನ್ನು ಹಿಂದಕ್ಕೆ ಕರೆಯಿಸಿದನು. ಯುಧಿಷ್ಠಿರನಿಗೆ ಕಾಪಟ್ಯವೆಂಬುದು ತಿಳಿಯಲೇ ತಿಳಿಯದು. ಹಿರಿಯರ ವಾಕ್ಯದಲ್ಲಿ ತುಂಬಾ ಗೌರವ. ಅವನು ದೊಡ್ಡಪ್ಪನ ಮಾತಿಗೆ ಯದುರು ಹೇಳದೆ ಜೂಜಾಟದಲ್ಲಿ ಕೂತುಕೊಂಡನು. ಆ ಆಟದಲ್ಲಿ ಕೂಡ ಯುಧಿಷ್ಠಿರನ ಮೇಲೆ ದೊಡ್ಡಮ್ಮನ ಕಟಾಕ್ಷವು ಪೂರ್ಣವಾಗಿತ್ತು. ಕೌರವರೇ ಗೆದ್ದರು. ಆಗ ಪಾಂಡವರು ಹನ್ನೆರಡು ವರ್ಷ ಕಾಡಿಗೆ ಹೊರಡಬೇಕಾಯಿತು. ಕುಂತಿಯನ್ನು ವಿದುರನ ಮನೆಯಲ್ಲಿ ಬಿಟ್ಟು ದ್ರೌಪದಿಯನ್ನು ಸಂಗಡ ಕರೆದುಕೊಂಡು ಪಾಂಡವರು ವನವಾಸಕ್ಕೆ ಪ್ರಯಾಣ ಮಾಡಿದರು.

ಸಭಾಮಂಟಪದಲ್ಲಿ ದುಶ್ಶಾಸನನು ದ್ರೌಪದಿಯ ತುರುಬು ಹಿಡಿದು ಎಳೆದು ಕೊಂಡು ಬಂದು ಆಡಬಾರದ ಮಾತುಗಳನ್ನು ಆಡಿ ನಿಂದಿಸಿ ಬೈದು ಸೀರೆ ಸುಲಿದು ಮಾನಭಂಗಮಾಡಲಿಕ್ಕೆ ಯತ್ನಿಸಿದುದು ಛಲಿಗಾರನಾದ ಭೀಮನಿಗೆ ಸೈರಿಸಲಿಲ್ಲ. ಆಗಲಾ ವೀರನು ಸಭೆಯಲ್ಲಿ ನಿಂತು ದುಶ್ಶಾಸನನನ್ನು ನೋಡಿ, ಎಲಾ ನೀಚಾ! ನೀನು ಮಾಡಿದ ಅಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಲಾರದೆ ತೀರದು. ನಾನು ನಿನ್ನ ಎದೆಯನ್ನು ಸೀಳಿ ಬಿಸಿಯ ರಕ್ತವನ್ನು ಕುಡಿಯುವೆನು. ನಿನ್ನ ರಕ್ತವನ್ನು ಈ ದ್ರೌಪದಿಯ ತಲೆಗೆ ಸವರಿ ನಿನ್ನ ಹಲ್ಲುಗಳಿಂದ ತಲೆ ಬಾಚಿ ತುರುಬು ಕಟ್ಟುವೆನು. ಈ ಮಾತು

ನಿಶ್ಚಯವೆಂದು ಪ್ರತಿಜ್ಞೆಮಾಡಿದನು. ಬಳಿಕ ದುರ್ಯೋಧನನನ್ನು ನೋಡಿ ಎಲಾ ಮೂರ್ಖ! ಪತಿವ್ರತೆಯಾದ ದ್ರೌಪದಿಯನ್ನು ನನ್ನ ತೊಡೆಯ ಮೇಲೆ ಬಂದು ಕುಳಿತುಕೊಳ್ಳೆಂದು ನೀನು ಹೇಳಿದ್ದು ಧರ್ಮವೇ? ನಿನಗೆ ಇದಕ್ಕೆ ತಕ್ಕ ಶಾಸ್ತಿ ಮಾಡುವೆನು. ಇಗೋ ನೋಡು. ಈ ಮಹಾಗದೆಯಿಂದ ನಿನ್ನ ತೊಡೆಯನ್ನು ಹೊಡೆದುಹಾಕುವೆನು ಎಂದು ಪ್ರತಿಜ್ಞೆಯನ್ನು ಮಾಡಿದನು. ತರುವಾಯ ಅರ್ಜುನನು ಕರ್ಣನನ್ನು ನೋಡಿ, ಎಲಾ ದುರಹಂಕಾರ! ನೀನು ದುರ್ಯೋಧನನಿಗೆ ಬೋಧಿಸಿ ಇಷ್ಟು ಕೇಡುಗಳಿಗೆ ಗುರಿಮಾಡಿದೆ! ಯುದ್ಧದಲ್ಲಿ ನಾನು ನಿನ್ನನ್ನು ಸಂಹರಿಸದೆ ಬಿಡೆನು ಎಂದು ಆಣೆ ಇಟ್ಟುಕೊಂಡನು. ಸಹದೇವನು ಶಕುನಿಯನ್ನೂ ನಕುಲನು ಉಳಿದ ಶೂರರನ್ನೂ ಕೊಂದುಬಿಡುವೆನೆಂದೂ ಪ್ರತಿಜ್ಞೆಮಾಡಿದರು. ಬಳಿಕ ಪಾಂಡವರು ವನವಾಸಕ್ಕೆ ಸಿದ್ಧರಾದರು.

---

## ಎಂಟನೇ ಪಾಠ.

ಪಾಂಡವರು ವನವಾಸಮಾಡಲಿಕ್ಕೆ ಹೊರಟರು. ಅವರನ್ನು ಅಗಲುವುದಕ್ಕೆ ಯಾರಿಗೂ ಇಷ್ಟವಿರಲಿಲ್ಲ. ಎಲ್ಲರೂ ಅವರ ಸಂಗಡಲೇ ಹೊರಟು ಕಾಡಿಗೆ ಬರುವೆವೆಂದು ಹಿಂಬಾಲಿಸಿಹೋದರು. ಯುಧಿಷ್ಠಿರನು ವನವಾಸದ ಕಷ್ಟಗಳನ್ನು ಅವರಿಗೆ ತಿಳಿಯಹೇಳಿ ಅವರನ್ನು ಹಿಂದಕ್ಕೆ ಕಳುಹಿಸಿಕೊಟ್ಟನು. ಆದರೂ ಬ್ರಾಹ್ಮಣರು ಅವರನ್ನು ಅಗಲಲಾರದೆ, ನೀವು ಎಲ್ಲಿದ್ದರೂ ನಿಮ್ಮ ಸಂಗಡಲೇ ನಾವು ವಾಸಮಾಡಿಕೊಂಡಿರುವೆವು ಎಂದು ಬೇಡಿಕೊಂಡರು. ಪಾಂಡವರು ಅವರನ್ನು ಕರೆದುಕೊಂಡು ಕಾಡಿಗೆ ಹೋದರು. ಅಲ್ಲಿ ಅವರಿಗೇನೇ ಊಟಕ್ಕೆ ಕಷ್ಟ. ತಮ್ಮ ಜತೆಯಲ್ಲಿದ್ದ ಬ್ರಾಹ್ಮಣರಿಗೆ ಎಲ್ಲಿಂದ ತಂದು ಒದಗಿಸಿಕೊಡುವರು? ಏನು ಮಾಡಬೇಕೆಂಬ ಚಿಂತೆ ಹುಟ್ಟಿತು. ಆಗ ಯುಧಿಷ್ಠಿರನು ಸೂರ್ಯದೇವರನ್ನು ಕುರಿತು ತಪಸ್ಸುಮಾಡಿದನು. ಆ ದೇವನು ಪ್ರತ್ಯಕ್ಷನಾಗಿ ಆತನಿಗೆ ಒಂದು **ಅಕ್ಷಯಪಾತ್ರೆ**ಯನ್ನು ಕೊಟ್ಟು ಅಯ್ಯಾ! ಯುಧಿಷ್ಠಿರನೇ! ಈ ದ್ರೌಪದಿಯು ಸ್ನಾನಮಾಡಿ ಈ ಪಾತ್ರೆಯನ್ನು ತೆಗೆದುಕೊಂಡು ಬಡಿಸುತ್ತಾ ಹೋದರೆ

ಎಷ್ಟು ಮಂದಿಗಾದರೂ ಅವರವರಿಗೆ ಬೇಕಾದ ಭಕ್ಷ್ಯ ಭೋಜ್ಯಗಳನ್ನು ಇದು ಒದಗಿಸಿಕೊಡುವುದು. ಈಕೆ ಊಟಮಾಡಿದ ಮೇಲೆ ಇದರೊಳಗೆ ಏನೂ ಉಳಿಯಲಾರದು ಎಂದು ವರವನ್ನು ಕೊಟ್ಟು ಹೊರಟುಹೋದನು. ಇದರಿಂದ ಪಾಂಡವರೂ ಅವರ ಸಂಗಡ ಇದ್ದವರು ಸುಖವಾಗಿ ಭೋಜನ ಮಾಡಿಕೊಂಡು ತೃಪ್ತರಾಗಿ ವನದಲ್ಲಿ ಸಂತೋಷದಿಂದಿದ್ದರು. ಅವರು ಮೊದಲು ವಾಸಮಾಡುತ್ತಿದ್ದ ಕಾಡಿಗೆ ಕಾಮ್ಯಕವೆಂದು ಹೆಸರು.

ಪಾಂಡವರು ಕಾಡಿಗೆ ಹೋದ ಮೇಲೆ ಹಸ್ತಿನಾವತಿಯಲ್ಲಿ ಧೃತ ರಾಷ್ಟ್ರನೂ ವಿದುರನೂ ಒಂದು ಕಡೆ ಕುಳಿತು ಏನೋ ಮಾತನಾಡುತ್ತಿದ್ದರು.

ವಿದುರನು ದೊರೆಯನ್ನು ನೋಡಿ ಪ್ರಭುವೆ! ನಿನ್ನ ಹಿರಿಯ ಮಗನು ಬಲು ದುಷ್ಟನು. ಅವನ ಮಾತನ್ನು ಕೇಳಿಕೊಂಡು ನಿರಪರಾಧಿಗಳಾದ ಪಾಂಡವರನ್ನು ಕಾಡಿಗೆ ಕಳುಹಿಸಿದ್ದು ಧರ್ಮವಲ್ಲ. ಇದರಿಂದ ನಿನ್ನ ವಂಶವೇ ಹಾಳಾಗುವುದು. ವಿನಾಶಕಾಲಕ್ಕೆ ಇಂತಹ ವಿಪರೀತ ಬುದ್ಧಿಗಳು ಹುಟ್ಟು ವುದು ಸಹಜ. ಈಗಲಾದರೂ ಅವರನ್ನು ಹಿಂದಕ್ಕೆ ಕರೆಸಿ ಅವರ ರಾಜ್ಯ ವನ್ನು ಅವರಿಗೆ ಕೊಟ್ಟು ಸಮಾಧಾನಪಡಿಸಿಕೊ ಎಂದು ಬುದ್ಧಿ ಹೇಳಿದನು. ಧೃತರಾಷ್ಟ್ರನಿಗೆ ಈ ಮಾತು ಸೈರಿಸಲಿಲ್ಲ. ಮಗನ ಮೇಲಿನ ಮೋಹದಿಂದ ವಿದುರನ ಮೇಲೆ ಕೋಪಿಸಿಕೊಂಡು, ಎಲಾ! ನೀನು ಬೇಕಾದ ಕಡೆಗೆ ಹೋಗು ಇಲ್ಲಿರಬೇಡ ಎಂದು ಗದರಿಸಿದನು. ಕೂಡಲೇ ಅವನು ಅಲ್ಲಿಂದ ಹೊರಟು ಪಾಂಡವರಿದ್ದ ಕಾಡಿಗೆ ಹೋಗಿ ಅವರ ಸಂಗಡ ವಾಸಮಾಡಿಕೊಂಡಿದ್ದನು. ಅವನು ಹೊರಟುಹೋದ ಮೇಲೆ ಧೃತರಾಷ್ಟ್ರನಿಗೆ ಮನಸ್ಸು ಕರಗಿತು. ಅವನು ವಿದುರನನ್ನು ಮರಳಿ ಕರೆಯಿಸಿಕೊಂಡು ಸಮಾಧಾನ ಹೇಳಿ ತನ್ನ ತಪ್ಪನ್ನು ಒಪ್ಪಿಕೊಂಡು ಅವನ ಕ್ಷಮೆಬೇಡಿದನು.

ಪಾಂಡವರು ಜೂಜಿನಲ್ಲಿ ಸೋತುಹೋಗಿ ಕಾಡಿಗೆ ಬಂದಿರುವರೆಂದು ಕೇಳಿ ಅವರ ಹಿತಚಿಂತಕರಾದ **ಭೋಜ, ಅಂಧಕ, ಪಾಂಚಾಲ** ಮೊದ ಲಾದ ರಾಜರೆಲ್ಲಾ ಅವರ ಬಳಿಗೆ ಹೋಗಿ ಕ್ಷೇಮಸಮಾಚಾರಗಳನ್ನೆಲ್ಲಾ ವಿಚಾರಿಸಿದರು. ಮಹಾಋಷಿಗಳು ಅಲ್ಲಿಗೆ ಹೋಗಿ ಅವರನ್ನು ಸಂತೈಸಿ

ದರು. ಕೃಷ್ಣನು ಬಂದು ದ್ರೌಪದಿಯನ್ನು ಸಮಾಧಾನಮಾಡಿದನು ಮತ್ತು ಅವನು ತನ್ನ ತಂಗಿಯಾದ ಸುಭದ್ರೆಯನ್ನೂ ಸೋದರಳಿಯನಾದ ಅಭಿಮನ್ಯುವನ್ನೂ ಕರೆದುಕೊಂಡು ದ್ವಾರಕಿಗೆ ಹೋದನು. ದ್ರುಪದರಾಯನ ಮಗನಾದ **ದೃಷ್ಟದ್ಯುಮ್ನ**ನು ಆಕೆಯ ಮಕ್ಕಳನ್ನು ತಮ್ಮ ಊರಿಗೆ ಕರೆದುಕೊಂಡು ಹೋದನು. ಉಳಿದ ರಾಜರೆಲ್ಲಾ ಯುಧಿಷ್ಠಿರನ ಅಪ್ಪಣೆಯನ್ನು ಪಡೆದು ತಮ್ಮ ಊರಿಗೆ ಹೋದರು.

ದ್ರೌಪದಿಯು ಸಭೆಯಲ್ಲಿ ತನಗೆ ಉಂಟಾದ ಅವಮಾನವನ್ನು ನೆನೆನೆನೆದು ಚಿಂತಿಸಿದಳು. ಆ ದಿನ ಸಾಯಂಕಾಲ ಅವರೆಲ್ಲಾ ಕುಳಿತುಕೊಂಡು ಮಾತನಾಡಿಕೊಳ್ಳುತ್ತಿರುವಾಗ ದ್ರೌಪದಿಯು ಧರ್ಮರಾಯನನ್ನು ನೋಡಿ, ನಮಸ್ಕರಿಸಿ, ಪ್ರಾಣಕಾಂತನೇ! ಸಭೆಯಲ್ಲಿ ನನಗೆ ಉಂಟಾದ ಅವಮಾನಕ್ಕಾಗಿ ನೀನು ಕೌರವರಿಗೆ ಯಾವ ಶಿಕ್ಷೆಯನ್ನೂ ಮಾಡದೆ ಬಿಟ್ಟುಬಿಟ್ಟೆ! ಇದರಿಂದ ನನ್ನ ದುಃಖವು ದಿನದಿನಕ್ಕೂ ಉಕ್ಕಿ ಬರುತ್ತಿದೆ. ನಿಮ್ಮಂಥ ವೀರಪತಿಗಳನ್ನು ಪಡೆದು ನನ್ನ ಗತಿ ಹೀಗಾಯಿತು ಎಂದು ಪೇಚಾಡಿದಳು. ಅದಕ್ಕೆ ಆತನು ದ್ರೌಪದೀ! ಈ ಮಾತುಗಳು ನಿನ್ನಂಥ ಉತ್ತಮ ಸ್ತ್ರೀಗೆ ತಕ್ಕವುಗಳಲ್ಲ. ಯಾರಾದರೂ ಕೇಡುಮಾಡಿದರೆ ಅವರನ್ನು ಕ್ಷಮಿಸಬೇಕೆಂದು ದೇವರನ್ನು ಬೇಡಿಕೊಳ್ಳಬೇಕು. ಮನುಷ್ಯರಿಗೆ ಸೈರಣೆ ಇರಬೇಕಾದ್ದು ಅಗತ್ಯ. ಕಷ್ಟ ಸುಖಗಳಲ್ಲಿ ಏಕರೀತಿಯಾಗಿ ಧೈರ್ಯದಿಂದಿರಬೇಕು. ಅವರ ಕ್ಷೇಮವೇ ನಮ್ಮ ಕ್ಷೇಮ; ಅವರ ಚಿಂತೆಯೇ ನಮ್ಮ ಚಿಂತೆ ಎಂದು ತಿಳಿದಿರುವವನೇ ಪ್ರಾಜ್ಞನು. ಕೌರವರ ಮೇಲೆ ದ್ವೇಶವು ಬ್ಡೇಡ'' ಎಂದು ಆಕೆಗೆ ಹಲವು ವಿಧವಾಗಿ ಬುದ್ಧಿಮಾತುಗಳನ್ನು ಹೇಳಿದನು. ದುಃಖಾಗ್ನಿಯಿಂದ ಬೇಯುತ್ತಿದ್ದ ಆ ಪತಿವ್ರತೆಗೆ ಗಂಡನ ಮಾತು ಸಮ್ಮತಿಸಲಿಲ್ಲ. ಹೇಗಾದರೂ ಮಾಡಿ, ಹಗೆಯನ್ನು ತೀರಿಸಬೇಕೆಂದು ಹಟಹಿಡಿದಳು. ಭಗವಂತನು ಇಂಥ ಅನ್ಯಾಯಮಾಡಬಹುದೇ? ಗುಣವಂತರಿಗೇನೇ ಎಲ್ಲಾ ದುಃಖಗಳನ್ನೂ ತಂದಿಡುವನಲ್ಲ! ನಿನ್ನ ಕ್ಷಮಾಗುಣದಿಂದಲೇ ನಾವು ಇಷ್ಟು ಕಷ್ಟಕ್ಕೆ ಬಂದೆವು ಎಂದು ಅಂಗಲಾಚಿಕೊಂಡಳು.

ಭೀಮನು ಅವಳ ಮಾತುಗಳಿಗೇನೆ ಸಮ್ಮತಿಸಿ ಅಣ್ಣನನ್ನು ದೂರಿದನು. ಅಷ್ಟರಲ್ಲಿ ವೇದವ್ಯಾಸಮುನಿಗಳು ಅಲ್ಲಿಗೆ ಬಂದು, ಅವನಿಗೆ ಸಮಾಧಾನ ಹೇಳಿ, ಮನಸ್ಸಿನ ಚಿಂತೆಯನ್ನು ಬಿಡಿಸಿದರು. ಅರ್ಜುನನು ಪರಮೇಶ್ವರ ನನ್ನು ಪ್ರಾರ್ಥಿಸಿ, ದಿವ್ಯಾಸ್ತ್ರಗಳನ್ನು ತಂದರೆ ಕೌರವರನ್ನು ಸುಲಭವಾಗಿ ಸೋಲಿಸಬಹುದೆಂದು ಹೇಳಿ, ಅರ್ಜುನನಿಗೆ ದಿವ್ಯ ಮಂತ್ರಗಳನ್ನು ಉಪ ದೇಶ ಮಾಡಿದರು. ಆತನ ಅಪ್ಪಣೆಯಂತೆ ಅರ್ಜುನನು ತಪಸ್ಸುಮಾಡ ಲಿಕ್ಕೆ ಒಡಂಬಟ್ಟನು. ವ್ಯಾಸಮಹಾಋಷಿಗಳು ಅವರನ್ನು ಹರಸಿ ಹೊರಟು ಹೋದರು.

ಬಳಿಕ ಅರ್ಜುನನು ಹಿಮಾಲಯ ಪರ್ವತದ ಉತ್ತರ ದಿಕ್ಕಿಗೆ ಇರುವ ಇಂದ್ರಕೀಲವೆಂಬ ಪರ್ವತಕ್ಕೆ ಹೋಗಿ, ಅಲ್ಲಿ ಕುಳಿತು, ತಪಸ್ಸು ಮಾಡತೊಡಗಿದನು. ದೇವೇಂದ್ರನು ಅವನ ತಪಸ್ಸಿಗೆ ಮೆಚ್ಚಿ, ಒಬ್ಬ ಮುನಿಯ ವೇಷವನ್ನು ಧರಿಸಿಕೊಂಡು ಬಂದು, ಅವನನ್ನು ಕುರಿತು "ಎಲೈ ಭಕ್ತನೇ! ನಿನಗೆ ಏನು ಬೇಕು? ಕೇಳಿಕೋ, ವರವನ್ನು ಕೊಡುವೆನು" ಎಂದು ಹೇಳಿದನು. ಅದಕ್ಕೆ ಅರ್ಜುನನು. "ಮಹಾತ್ಮನೇ! ನನಗೆ ಸ್ವರ್ಗ ಭೋಗವಾಗಲಿ, ಐಶ್ವರ್ಯವಾಗಲಿ, ಬೇಕಾಗಿಲ್ಲ. ನನ್ನ ಹಗೆಗಳಾದ ಕೌರವರನ್ನು ನಿರ್ಮೂಲ ಮಾಡಬೇಕೆಂಬುದೇ ನನ್ನ ಬಯಕೆ. ಇದು ನೆರವೇರುವಂತೆ ಅನುಗ್ರಹಿಸಿದರೆ ಸಾಕು" ಎಂದು ಬೇಡಿಕೊಂಡನು. ಅದಕ್ಕೆ ಇಂದ್ರನು, "ಮಗುವೇ! ನೀನು ಚಿಂತಿಸಬೇಡ. ನೀನು ಪರಮೇಶ್ವರನನ್ನು ಕುರಿತು ತಪಸ್ಸು ಮಾಡು. ಮಹದೇವನ ಅನುಗ್ರಹದಿಂದ ನಿನ್ನ ಇಷ್ಟವು ಸಿದ್ಧಿಸುವುದು" ಎಂದು ಹೇಳಿ, ಹೊರಟು ಹೋದನು.

ತರುವಾಯ ಅರ್ಜುನನು, ಹಿಮಾಲಯ ಪರ್ವತಕ್ಕೆ ಹೋಗಿ ಈಶ್ವರ ನನ್ನು ಕುರಿತು ತಪಸ್ಸು ಮಾಡಿದನು. ಇವನ ಘೋರವಾದ ತಪಸ್ಸನ್ನು ನೋಡಿ, ಪರಮೇಶ್ವರನಿಗೆ ಕರುಣವುಂಟಾಯಿತು. ಮುಂದೆ ನಾನು ಇವ ನನ್ನು ಅನುಗ್ರಹಿಸಬೇಕೆಂದು ಮನಸ್ಸಿನಲ್ಲಿ ಯೋಚಿಸಿ, ಬೇಡನ ವೇಷವನ್ನು ಧರಿಸಿಕೊಂಡು, ಅಲ್ಲಿಗೆ ಬಂದನು. ಆಗ ಒಂದು ಕಾಡುಹಂದಿಯು ಅವನ

ಹತ್ತಿರಕ್ಕೆ ಬೇಗ ಬಂದಿತು. ಅರ್ಜುನನು ಅದರ ಮೇಲೆ ಒಂದು ಬಾಣ ವನ್ನು ಪ್ರಯೋಗಿಸಿದನು. ಅದೇ ವೇಳೆಯಲ್ಲಿಯೇ ಈಶ್ವರನು ಕೂಡ ಹಂದಿಯ ಮೇಲೆ ಒಂದು ಬಾಣವನ್ನು ಬಿಟ್ಟನು. ಅವರಿಬ್ಬರ ಬಾಣಗಳೂ ಏಕ ಕಾಲಗಳಲ್ಲಿಯೇ ಹಂದಿಗೆ ತಗಲಿದವು. ಅದು ಸತ್ತು ನೆಲಕ್ಕೆ ಬಿತ್ತು. ಸತ್ತ ಹಂದಿ ನನ್ನದೆಂದು ಈಶ್ವರನೂ, ನಾನು ಕೊಂದ ಹಂದಿ ನನ್ನದೇ ಎಂದು ಅರ್ಜುನನೂ ವಾಗ್ವಾದ ಮಾಡಿದರು. ಕಲಹವು ಬಹಳವಾಗಿ ನಡೆಯಿತು. ಕೊನೆಗೆ ಅವರಿಬ್ಬರಿಗೂ ಘೋರ ಯುದ್ಧವಾಯಿತು. ಕಿರಾತಾರ್ಜುನರು ಬಹಳ ಹೊತ್ತಿನ ವರೆಗೂ ಕಾದಿದರು. ಈಶ್ವರನು ಅರ್ಜುನನ ಶೌರ್ಯಕ್ಕೂ ಧೈರ್ಯಕ್ಕೂ, ಬಿಲ್ಲಾಳುತನದ ಜಾಣೇಗೂ ಬಹಳವಾಗಿ ಮೆಚ್ಚಿಕೊಂಡನು. ಆ ಪರಶಿವನು ಅವನಲ್ಲಿ ಅನುಗ್ರಹಿಸಿ ಪಾಶುಪತವೆಂಬ ಹೆಸರುಳ್ಳ ತನ್ನ ಅಸ್ತ್ರವನ್ನು ಅವನಿಗೆ ಕೊಟ್ಟು, ಅದನ್ನು ಉಪಯೋಗಿಸುವ ಮತ್ತು ಉಪ ಸಂಹರಿಸುವ ತೆರವನ್ನು ಉಪದೇಶ ಮಾಡಿದನು. ಇಂದ್ರ, ಅಷ್ಟದಿಕ್ಪಾ ಲಕರು ಬಂದು ತಮ್ಮ ತಮ್ಮ ಅಸ್ತ್ರಗಳನ್ನು ಕೊಟ್ಟು, ಅವುಗಳನ್ನು ಪ್ರಯೋ ಗಿಸುವ ಕ್ರಮವನ್ನೂ ಕಲಿಸಿದರು. ಇಂದ್ರನು ಅರ್ಜುನನನ್ನು ತನ್ನ ಲೋಕಕ್ಕೆ ಕರೆದುಕೊಂಡು ಹೋದನು.

ಅತ್ತ ಕಾಡಿನಲ್ಲಿ ಯುಧಿಷ್ಠಿರಾದಿಗಳು ಬಹು ದಿನಗಳ ವರೆಗೂ ನೋಡಿ ದರು. ಅರ್ಜುನನು ಹಿಂತಿರುಗಿ ಬರಲಿಲ್ಲ. ಅವರು ಚಿಂತೆಯಿಂದ ಕೃಶ ರಾದರು. ಅಷ್ಟರಲ್ಲಿ **ಲೋಮಶ**ನೆಂಬ ಮುನಿಯು ಪಾಂಡವರ ಬಳಿಗೆ ಬಂದು ''ಧರ್ಮಾತ್ಮರೇ! ನೀವು ಚಿಂತಿಸಬೇಡಿರಿ. ಅರ್ಜುನನು ಸ್ವರ್ಗ ದಲ್ಲಿ ಇಂದ್ರನ ಆತಿಥ್ಯದಲ್ಲಿ ಸುಖವಾಗಿದ್ದಾನೆ. ದಿವ್ಯಾಸ್ತ್ರಗಳೆಲ್ಲಾ ಅವನ ಸ್ವಾಧೀನವಾದವು. ಇಷ್ಟರಲ್ಲಿಯೇ ಇಲ್ಲಿಗೆ ಹಿಂದಿರುಗಿ ಅವನು ಬಂದು ಸೇರುವನು. ಅಷ್ಟರಲ್ಲಿ ಕಾಡಿನಲ್ಲಿರುವ ಪುಣ್ಯತೀರ್ಥಗಳನ್ನೆಲ್ಲಾ ಸಂಚರಿಸು ತ್ತಿರಬಹುದು. ಅದನ್ನು ನಿಮಗೆ ತಿಳಿಸಬೇಕೆಂದು ಇಂದ್ರನು ನನ್ನನ್ನು ನಿಮ್ಮ ಬಳಿಗೆ ಕಳುಹಿರುವನು'' ಎಂದು ಹೇಳಿದನು.

ಅದನ್ನು ಕೇಳಿ ಪಾಂಡವರು ಬಹು ಸಂತೋಷಪಟ್ಟರು. ಬಳಿಕ ಆತ ನನ್ನು ಕರೆದುಕೊಂಡು ತೀರ್ಥಯಾತ್ರೆಗೆ ಹೊರಟರು. ಆ ಮಹಾತ್ಮರಿಗೆ ಆತನು

ಪುಣ್ಯಕ್ಷೇತ್ರಗಳೆಲ್ಲಾ ತೋರಿಸುತ್ತಾ ಅಲ್ಲಿಯ ಮಹತ್ತುಗಳನ್ನು ತಿಳಿಸಿ ಅವರನ್ನು ಬದರಿಕಾಶ್ರಮಕ್ಕೆ ಕರೆದುಕೊಂಡು ಹೋದನು. ಅವರು ಅಲ್ಲಿ ವಾಸಮಾಡುತಿದ್ದಾಗ ಒಂದು ದಿನ ಬಲವಾದ ಗಾಳಿ ಬೀಸಿತು. ಬಹು ಸುವಾಸನೆಯುಳ್ಳ ಗಾಳಿಯಲ್ಲಿ **ಸೌಗಂಧಿಕ**ವೆಂಬ ತಾವರೇ ಹೂವಿನ ವಾಸನೆ ಇತ್ತು. ಆ ಹೂವನ್ನು ತಂದು ದೇವರನ್ನು ಪೂಜಿಸಬೇಕೆಂದು ದ್ರೌಪದಿಯು ಬಯಸಿದಳು. ಬಲಶಾಲಿಯಾದ ಭೀಮಸೇನನು ಆಕೆಯ ಇಷ್ಟವನ್ನು ತೀರಿಸುವೆನೆಂದು ವಾಗ್ದಾನ ಮಾಡಿ ಆ ವಾಸನೆ ಬರುವ ದಿಕ್ಕನ್ನು ಕುರಿತು ಹೋದನು. ಹಾಗೆ ಹೋಗುತ್ತಿರುವ ಕಾಲದಲ್ಲಿ ರಾಮದೂತನಾದ **ಹನುಮಂತ**ನು ಆತನಿಗೆ ಎದುರಾಗಿ ಬಂದನು.

ಅವರಿಬ್ಬರೂ ಪರಸ್ಪರ ಕ್ಷೇಮಸಮಾಚಾರ ವಿಚಾರಿಸಿದರು. ಅವರಿಬ್ಬರೂ ವಾಯುದೇವನ ವರದಿಂದ ಹುಟ್ಟಿದವರು. ಪರಸ್ಪರ ಸಹೋದರರಾಗಬೇಕು. ಇಬ್ಬರಿಗೂ ಸ್ನೇಹವಾಯಿತು. ಹನುಮಂತನು ಯುದ್ಧಕಾಲದಲ್ಲಿ, ಅರ್ಜುನನ ರಥದ ಮೇಲೆ ಕುಳಿತುಕೊಂಡು ಪಾಂಡವರಿಗೆ ಸಹಾಯ ಮಾಡುತ್ತೇನೆಂದು ಒಪ್ಪಿಕೊಂಡನು. ಬಳಿಕ ಭೀಮನು ಹೊರಟಿರುವ ಕಾರ್ಯವನ್ನು ಕೇಳಿ ತಿಳಿದು ಆ ತಾವರೆ ಹೂವುಗಳು ಇರುವ ಗಂಧಮಾದನ ಪರ್ವತಕ್ಕೆ ದಾರಿ ತೋರಿಸಿ ಹೊರಟು ಹೋದನು. ಭೀಮನು ಆ ಸರೋವರವನ್ನು ಹುಡುಕಿಕೊಂಡು ಅಲ್ಲಿಗೆ ಹೋಗಿ ಸೇರಿದನು. ಆ ಕೆರೆಯು **ಕುಬೇರನಿ**ಗೆ ಸೇರಿದುದು. ಅಲ್ಲಿ ಕೆಲವರು ರಾಕ್ಷಸರು ಕಾವಲಾಗಿದ್ದರು ತಮ್ಮ ಒಡೆಯನ ಅಪ್ಪಣೆ ಇಲ್ಲದೆ ಒಂದು ಹುವ್ವನ್ನಾದರೂ ಒಬ್ಬರಿಗೂ ಹೊರಕ್ಕೆ ಕೊಡುತ್ತಿರಲಿಲ್ಲ. ಭೀಮಸೇನನಿಗೂ ಅವರಿಗೂ ಬಲವಾಗಿ ಹೋರಾಟವಾಯಿತು. ಅವನು ಬಹಳ ಕೋಪದಿಂದ ಆ ರಾಕ್ಷಸರೊಂದಿಗೆ ಯುದ್ಧಮಾಡಿ ಅವರನ್ನೆಲ್ಲಾ ಓಡಿಸಿದನು. ಕುಬೇರನಿಗೆ ಈ ಸುದ್ದಿ ತಿಳಿಯಿತು. ಆತನು ಅಲ್ಲಿಗೆ ಬಂದು ಭೀಮನ ಸಾಹಸಕ್ಕೆ ಮೆಚ್ಚಿ ಭೀಮಣ್ಣ ನಿನ್ನ ಶೌರ್ಯವನ್ನು ಬಲ್ಲೆನು; ಇದಕ್ಕೇಕೆ ಇಷ್ಟು ಕಷ್ಟ ಪಟ್ಟೆ. ನಿನಗೆ ಬೇಕಾದಷ್ಟು ಹೂಗಳನ್ನು ಕಿತ್ತುಕೊಂಡು ಹೋಗು ಎಂದು ಹೇಳಿ ಹೊರಟು ಹೋದನು.

ಆಗ ಪಾಂಡವರೆಲ್ಲಾ ಅರಣ್ಯದಲ್ಲಿಯೇ ಸಂಚಾರಮಾಡುತ್ತ ಆ ಬೆಟ್ಟದ ಹತ್ತಿರಕ್ಕೆ ಬಂದು ಸೇರಿದರು. ಅಲ್ಲಿಗೆ ಭೀಮನೂ ಅರ್ಜುನನೂ ಬಂದು ಅವರಲ್ಲಿ ಸೇರಿಕೊಂಡರು. ಅಷ್ಟು ಹೊತ್ತಿಗೆ ಶ್ರೀಕೃಷ್ಣನು ಅಲ್ಲಿಗೆ ಬಂದು ಸೇರಿದನು. ಆತನು ಯುಧಿಷ್ಠಿರನ ಮನಸ್ಸನ್ನು ಕಂಡುಹಿಡಿಯಬೇಕೆಂದು ಯೋಚಿಸಿ ಅಯ್ಯಾ! ರಾಜನೇ! ಕೌರವರು ಬಲು ನೀಚರು, ಅವರ ಅಪರಾಧಕ್ಕೆ ತಕ್ಕ ಶಿಕ್ಷೆ ಮಾಡಲೇಬೇಕು. ಅವರ ಸಂಗಡ ಯುದ್ಧಮಾಡಿ ಗೆದ್ದು ರಾಜ್ಯವನ್ನು ಕೊಡಿಸಿಕೊಡುವೆನು. ನಡೆ, ಹೊರಡೋಣ''ವೆಂದು ಬೋಧಿಸಿದನು. ಆಹಾ! ಧರ್ಮರಾಯನು ಎಂದಿಗಾದರೂ ಧರ್ಮವನ್ನು ಬಿಡುವನೇ? ಅವನು ಶ್ರೀಕೃಷ್ಣನನ್ನು ನೋಡಿ ಮಿತ್ರನೇ! ನೀನು ಇಂಥಾ ಉಪದೇಶಮಾಡಬಹುದೇ? ಸತ್ಯವೇ ದೇವರು, ಸತ್ಯವೇ ತಾಯಿತಂದೆಗಳು. ಯಾರೂ ಅಸತ್ಯಕ್ಕೆ ಬೀಳಬಾರದು. ಅಧರ್ಮಮಾರ್ಗದಿಂದ ಎಷ್ಟು ಬರುವದಿದ್ದರೂ ನನಗೆ ಅದು ಬೇಕಾಗಿಲ್ಲ. ಎಷ್ಟು ಕಷ್ಟ ಬಂದರೂ ನನ್ನ ಪ್ರತಿಜ್ಞೆ ತೀರುವ ತನಕ ನಾನು ಕೌರವರ ಮೇಲೆ ಕೈಯೆತ್ತಲೊಲ್ಲೆನು. ಧರ್ಮಜ್ಞನಾದ ನೀನು ನನಗೆ ಇಂಥ ಉಪದೇಶಮಾಡಬಹುದೇ? ಎಷ್ಟು ಕಷ್ಟ ಬಂದರೂ ಸತ್ಯವನ್ನು ಬಿಡಬೇಡವೆಂದು ನನಗೆ ಬೋಧಿಸುವುದು ನಿನ್ನ ಧರ್ಮವು ಎಂದು ಹೇಳಿದನು. ಆಗ ಶ್ರೀಕೃಷ್ಣನು ''ಭಾವಾಜೀ! ನಿನ್ನ ಧರ್ಮಗುಣವನ್ನು ಪರೀಕ್ಷಿಸಬೇಕೆಂದು ಹೀಗೆ ಹೇಳಿದೆನೇ ಹೊರತು ನಿನ್ನ ಸತ್ಯ ಪ್ರತಿಜ್ಞೆಯನ್ನು ತಪ್ಪಿಸಬೇಕೆಂಬುದು ನನ್ನ ಉದ್ದೇಶವಲ್ಲ. ಹೇಗಾದರೂ ಮಾಡಿ ಆಡಿದ ಮಾತನ್ನು ಉಳಿಸಿಕೋ'' ಎಂದು ಸಮಾಧಾನ ಹೇಳಿದನು.

ಆ ವೇಳೆಯಲ್ಲಿ **ಮಾರ್ಕಂಡೇಯ**ನೆಂಬ ಮಹಾಮುನಿಯು ಅಲ್ಲಿಗೆ ಬಂದು ಸೇರಿದನು. ಯುಧಿಷ್ಠಿರನು ಆತನನ್ನು ಸತ್ಕರಿಸಿ ಮನ್ನಿಸಿದನು. ಆ ಮಹರ್ಷಿಯು ಧರ್ಮರಾಯನ ಸೇವೆಗೆ ಸಂತುಷ್ಟನಾಗಿ ''ಎಲೈ ಮಹಾರಾಜನೇ! ನೀನು ಹಲವು ಕಷ್ಟಗಳಿಗೆ ಸಿಕ್ಕಿದೆ. ಇವೆಲ್ಲಾ ಪ್ರಾರಬ್ಧಕರ್ಮದ ಫಲಗಳು ಅನುಭವಿಸಿಯೇ ತೀರಬೇಕಾದುವುಗಳು. ಮನುಷ್ಯರಿಗೆ ಯಾವಾಗಲೂ ಸೌಖ್ಯವೇ ಇರುವುದಿಲ್ಲ. ಹಾಗೆಯೇ ಕಷ್ಟಗಳೂ ಸ್ಥಿರವಾಗಿರುವು

ದಿಲ್ಲ. ಕತ್ತಲೆಯೂ ಬೆಳದಿಂಗಳೂ ಒಂದರ ಹಿಂದೆ ಒಂದು ಬರುವಂತೆ ಸುಖದುಃಖಗಳು ಆಯಾ ಕಾಲಗಳಲ್ಲಿ ತಾವಾಗಿಯೇ ಬರುತ್ತಿರುವುವು. ಸುಖ ಬಂದಾಗ ಅವು ನಿಮಿಷಗಳಂತೆ ಕಳೆದುಹೋಗುವುವು. ಕಷ್ಟಗಳು ಮಾತ್ರ ಅನುಭವಿಸುವಾಗ ತುಂಬ ಮನೋವ್ಯಥೆಯುಂಟಾಗುವುದು. ಸುಖ ದುಃಖಗಳಲ್ಲಿ ಸಮಾನಬುದ್ಧಿಯುಳ್ಳವನೇ ಜ್ಞಾನಿಯೆನಿಸಿಕೊಳ್ಳುವನು. ನೀನು ಪ್ರಾಜ್ಞನು. ನಿನಗೆ ಹೇಳಬೇಕಾದುದೇನಿದೆ? ದುಷ್ಟರಾದ ಕೌರವರು ತಮ್ಮ ಅಕೃತ್ಯದ ಫಲವನ್ನು ಅನುಭವಿಸದೆ ತೀರದು. ಚಿಂತಿಸಬೇಡ'' ಎಂದು ಹೇಳಿದನು. ಬಳಿಕ ಧರ್ಮರಾಯನು ಮಾರ್ಕಂಡೇಯನನ್ನು ನೋಡಿ ಪೂಜ್ಯರೇ! ದಯಮಾಡಿ ನನಗೆ ಮುಖ್ಯ ಧರ್ಮಗಳನ್ನು ಉಪದೇಶಮಾಡ ಬೇಕೆಂದು ಬೇಡಿಕೊಂಡನು. ಅದಕ್ಕೆ ಆ ಮುನಿಯು ಹಾಗೆಯೇ ಆಗಬಹು ದೆಂದು ಹೇಳತೊಡಗಿದನು.

---

## ಒಂಭತ್ತನೆಯ ಪಾಠ.

ಧರ್ಮರಾಯನಿಗೆ ಮಾರ್ಕಂಡೇಯ ಮಹರ್ಷಿಗಳು ಹೇಳಿದ ಉಪದೇಶ ವಾಕ್ಯಗಳು. ಎಲೈ ಯುಧಿಷ್ಠಿರನೇ ಪ್ರಾಣಿ ಮಾತ್ರಕ್ಕೆ ಹಿಂಸೆ ಮಾಡಲೇ ಕೂಡದು. ಅಹಿಂಸೆಯೇ ಶ್ರೇಷ್ಠವಾದ ಧರ್ಮವು. ಸರ್ವ ಭೂತಗಳಲ್ಲಿಯೂ ದಯಾಪರನಾಗಿರಬೇಕು. ಎಂತಹ ಆಪತ್ಕಾಲ ಬಂದರೂ ಸತ್ಯವನ್ನು ಬಿಡಬಾರದು. ವಿದ್ಯೆ ಕಲಿಯುವುದು ಹೆಚ್ಚಲ್ಲ. ಅದಕ್ಕೆ ತಕ್ಕಂತೆ ವಿನಯ ಗುಣವಿಲ್ಲದಿದ್ದರೆ ಶೋಭಿಸುವುದಿಲ್ಲ. ಮನುಷ್ಯರ ಮನಸ್ಸು ಚಂಚಲ ವಾದದ್ದು, ಅದನ್ನು ಸ್ವಾಧೀನದಲ್ಲಿಟ್ಟುಕೊಂಡರೆ ಸಮಸ್ತ ಲೋಕಗಳನ್ನೂ ಜಯಿಸಬಹುದು. ಬುದ್ಧಿವಂತನಾದವನು ಮೊದಲು ತನ್ನ ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳಬೇಕು. ಅವುಗಳು ಹೋದ ಹಾಗೆ ಬಿಡಬಾರದು. ಬಳಿಕ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗ ಗಳನ್ನು ತ್ಯಜಿಸಬೇಕು. ಕ್ಷತ್ರಿಯರಿಗೆ ಪ್ರಜಾಪರಿಪಾಲನೆಯೇ ಶ್ರೇಷ್ಠವಾದ ಧರ್ಮವು. ಪೂರ್ವದಿಂದಲೂ ಅನುಸರಿಸಿಕೊಂಡು ಬಂದ ಕುಲಧರ್ಮವನ್ನು

ಕಾಪಾಡಿಕೊಳ್ಳುವುದರಿಂದ ಮೇಲುಂಟಾಗುವುದು. ಯಾವನಲ್ಲಿ ಆಗಲಿ ಉತ್ತಮ ಗುಣಗಳಿದ್ದರೆ ಅವುಗಳನ್ನು ಪರಿಗ್ರಹಿಸಿ ದುರ್ಗುಣಗಳನ್ನು ದೂರೀ ಕರಿಸಬೇಕು. ದೇವರನ್ನು ಭಕ್ತಿಯಿಂದ ಆರಾಧಿಸಬೇಕು. ಗುರುಗಳಲ್ಲಿ ವಿಧೇಯನಾಗಿರಬೇಕು. ಅಜ್ಞಾನದಿಂದ ಅಥವಾ ಸಹವಾಸ ದೋಷದಿಂದ ತಾನು ಮಾಡಿದ ತಪ್ಪುಗಳನ್ನು ತನ್ನ ಒಳ್ಳೆಯ ನಡತೆಗಳಿಂದ ಪರಿಹರಿಸಿಕೊಳ್ಳ ಬೇಕು. ಚಿತ್ತಶುದ್ಧಿಯುಳ್ಳವನಿಗೆ ಉಪವಾಸ, ವ್ರತ ಮೊದಲಾದ ನಿಯಮ ಗಳೇನೂ ಬೇಕಾಗಿಲ್ಲ. ವ್ಯರ್ಥವಾದ ಮಾತುಗಳಿಂದ ಕಾಲಹರಣ ಮಾಡು ವುದೂ, ತನಗೆ ಸಮಾನರಿಲ್ಲೆಂದು ಗರ್ವಿಸುವುದೂ, ತನ್ನ ಪ್ರಯೋಜನವೇ ಮುಖ್ಯವೆಂದು ತಿಳಿದು ಪರರಿಗೆ ತೊಂದರೆಮಾಡುವುದೂ ಉತ್ತಮಗುಣಗಳಲ್ಲ. ಮನಸ್ಸು, ಕೈ, ಬಾಯಿ ಇವುಗಳಿಗೆ ತ್ರಿಕರಣಗಳೆಂದು ಹೆಸರು. ಇವು ಮೂರ ರಲ್ಲಿಯೂ ಶುದ್ಧನಾಗಿರುವವನಿಗೆ ಲೋಕನಿಂದೆಯೂ ಇಲ್ಲ, ಯಾವ ಅಪಾ ಯವೂ ಸಂಭವಿಸಲಾರದು. ಯಾವ ಕುಲದಲ್ಲಿ ಹುಟ್ಟಿದರೇನು? ಪಾಪಕೃತ್ಯ ಗಳಿಗೆ ಹೆದರುವವನೂ, ಸುಳ್ಳಾಡದೆ ಇರುವವನೂ, ನಿಜವಾದ ಮಹರ್ಷಿ ಯೆಂದು ಹೇಳಬಹುದು. ಉತ್ತಮವಾದ ಕುಲದಲ್ಲಿ ಹುಟ್ಟಿದ್ದರೂ, ನೀಚ ಕೃತ್ಯಗಳನ್ನು ಮಾಡುವವನು ಹೊಲೆಯನಿಗಿಂತಲೂ ಕಡೆ. ಅಂಥವನನ್ನು ಕರ್ಮಚಂಡಾಲನೆಂದು ಕರೆಯುವರು. ಯಜ್ಞಾದಿ ಕರ್ಮಗಳನ್ನು ಮಾಡು ವುದಕ್ಕಿಂತಲೂ ಧರ್ಮವನ್ನು ಕಾಪಾಡಿಕೊಂಡು ಬರುವುದೇ ವಿಶೇಷವಾದದ್ದು. ಎಲೈ ರಾಯನೇ! ಧರ್ಮಜ್ಞನಾದ ನಿನಗೆ ಹೆಚ್ಚಾಗಿ ಹೇಳಬೇಕಾದ್ದಿಲ್ಲ, ನಿನ್ನ ತಮ್ಮಂದಿರು ಅಸಹಾಯಶೂರರು, ನಿಮ್ಮ ಪತ್ನಿಯಾದ ದ್ರೌಪದಿಯು ಪತಿ ವ್ರತಾ ತಿಲಕವೆನಿಸಿರುವಳು. ಶತ್ರುಗಳಾದ ಕೌರವರು ನಿಮ್ಮ ಮೇಲಣ ಅಸೂಯೆಯಿಂದ ನಿಮಗೆ ಹಲವು ತೊಂದರೆಗಳನ್ನು ಕೊಟ್ಟರು. ಇನ್ನೂ ಕೆಡಕುಗಳನ್ನು ಮಾಡಬೇಕೆಂತಲೇ ಇರುವರು. ಆದರೂ ನಿಮ್ಮ ಧರ್ಮಗಳ ಮುಂದೆ ಅವು ಒಂದೂ ನಿಲ್ಲಲಾರವು. ಅವರವರು ಮಾಡಿದ ಪಾಪಕೃತ್ಯ ಗಳನ್ನು ಅವರವರು ಅನುಭವಿಸಿಯೇ ತೀರಬೇಕು. ನೀನು ಅಧೈರ್ಯ ಪಡ ಬೇಡ, ಎಷ್ಟು ಕಷ್ಟಬಂದರೂ ಧರ್ಮವನ್ನು ಕಾಪಾಡಿಕೋ ಎಂದು ಹೇಳಿ ಆತನನ್ನು ಹರಸಿ ಹೊರಟುಹೋದನು.

ಅತ್ತ ಹಸ್ತಿನಾಪುರದಲ್ಲಿ ದುರ್‍ಯೋಧನನು ಕರ್ಣಾದಿ ಮಂತ್ರಿಗಳೊಂದಿಗೆ ಯೋಚಿಸಿ ವನವಾಸದಲ್ಲಿ ಕ್ಲೇಶಪಡುತ್ತಲಿರುವ ಪಾಂಡವರಿಗೆ ತಮ್ಮ ಹೆಮ್ಮೆಯನ್ನು ತೋರಿಸಿ ಬರಬೇಕೆಂದು ನಿಶ್ಚೈಸಿದನು. ಅವನು ಕಾಡಿನಲ್ಲಿರುವ ತನ್ನ ದನಗಳನ್ನು ನೋಡಿಕೊಂಡು ಬರಲಿಕ್ಕೆ ಘೋಷಯಾತ್ರೆಯೆಂಬ ನೆವವಿಟ್ಟುಕೊಂಡು ತನ್ನ ಪರಿವಾರದವರನ್ನೂ ಮಂತ್ರಿ ಜನಗಳನ್ನೂ, ರಾಣಿವಾಸದವರನ್ನೂ ಕರೆದುಕೊಂಡು ಬಲು ಅಟ್ಟಹಾಸದಿಂದ ಆಗ ಪಾಂಡವರಿದ್ದ **ದ್ವೈತವನ**ವೆಂಬ ಕಾಡಿಗೆ ಹೊರಟು ಬಂದನು. ಮಾರ್ಗದಲ್ಲಿ ಇವನಿಗೂ ಒಬ್ಬ ಗಂಧರ್ವನಿಗೂ ಮಾತಿಗೆ ಮಾತು ಬಂದು ದೊಡ್ಡ ಯುದ್ಧವೇ ಆಯಿತು. ಅದರಲ್ಲಿ ದುರ್‍ಯೋಧನನೂ ಅವನ ಸಂಗಡ ಬಂದ ಮಹಾವೀರರೂ ಶತ್ರುಗಳಿಗೆ ಸೆರೆಸಿಕ್ಕಿದರು. ಅವರನ್ನು ಹಿಡಿದುಕೊಂಡು ಗಂಧರ್ವರು ಹೋಗುತ್ತಿದ್ದರು. ಕರ್ಣನು ಓಡಿಹೋದನು. ಸ್ವಲ್ಪ ಸಮೀಪದಲ್ಲಿಯೇ ಪಾಂಡವರಿರುವರೆಂದು ಕೇಳಿ ದುರ್‍ಯೋಧನನ ಹೆಂಡತಿಯಾದ **ಭಾನುಮತಿ**ಯು ತನ್ನ ಓರಗಿತ್ತಿಯರೊಂದಿಗೆ ಅಲ್ಲಿಗೆ ಹೋಗಿ ಯುಧಿಷ್ಠಿರನ ಕಾಲುಗಳ ಮೇಲೆ ಬಿದ್ದು ತನ್ನ ಪತಿಯನ್ನು ಬಿಡಿಸಿಕೊಡಬೇಕೆಂದು ಬಹಳವಾಗಿ ಬೇಡಿಕೊಂಡಳು. ಧರ್ಮರಾಯನ ಮನಸ್ಸು ಬಹು ಮೃದುವಾದದ್ದು. ಪರರ ಕಷ್ಟವನ್ನು ನೋಡಿ ಆತನು ಸೈರಿಸತಕ್ಕವನೇ ಅಲ್ಲ. ಆ ಹೆಣ್ಣು ಮಕ್ಕಳ ಮೊರೆಯನ್ನು ಕೇಳಿ ಅವನ ಮನಸ್ಸು ಕರಗಿ ನೀರಾಗಿ ಹೋಯಿತು. ಆಗಲಾ ಧರ್ಮಾತ್ಮನು ತಮ್ಮನನ್ನು ನೋಡಿ "ಭೀಮಾ! ಈ ಹೆಂಗಸರ ಮೊರೆಯನ್ನು ಕೇಳಿದೆಯಾ? ಇಂತಹ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿರುವ ರಾಜಾಧಿರಾಜನನ್ನು ನಾವು ಬಿಡಿಸದೆ ಹೋದರೆ ನಮಗೆ ಅಪಕೀರ್ತಿಯಲ್ಲವೇ?" ಎಂದನು. ಭೀಮನಿಗೆ ಆ ಮಾತು ಸರಿಬೀಳಲಿಲ್ಲ. ಅವನು ರೋಷದಿಂದ ಬುಸುಗುಟ್ಟುತ್ತಾ ಯುಧಿಷ್ಠಿರನನ್ನು ಕುರಿತು "ಅಣ್ಣಯ್ಯಾ! ದ್ರೋಹಿಗಳಾದ ಕೌರವರನ್ನು ಸಮಯಬಂದಾಗ ಸಿಕ್ಕಿಸದೆ ಅವರನ್ನು ಕಾಪಾಡಲಿಕ್ಕೆ ಪ್ರಯತ್ನಪಡಬೇಕು. ನಾವು ಮಾಡಬೇಕಾಗಿದ್ದ ಕೆಲಸವನ್ನು ಗಂಧರ್ವರೇ ಮಾಡಿಬಿಟ್ಟರು. ನಮಗೆ ಲೋಕನಿಂದೆಯೇ ತಪ್ಪಿತು. ಈಗ ಅವರಿಗೆ ಸಹಾಯ ಮಾಡುವುದು ಯುಕ್ತವಾಗಿ ತೋರಲಿಲ್ಲ ಎಂದನು.

ಅದಕ್ಕೆ ಯುಧಿಷ್ಠಿರನು ತಮ್ಮಾ! ನಾವು ಪರಸ್ಪರ ಕಲಹ ಮಾಡುವಾಗ ಅವರು ನೂರು ಮಂದಿಯೇ ಬೇರೆ. ನಾವು ಐವರೇ ಬೇರೆ. ಪರರ ಮೇಲೆ ಕಲಹ ಮಾಡಬೇಕಾದರೆ ನಾವು ನೂರೈದು ಮಂದಿಯೂ ಒಂದೇ ಎಂದು ತಿಳಿಯಬೇಕು. ಪರರ ಸುಗುಣಗಳನ್ನು ಆರಿಸಿಕೊಳ್ಳಬೇಕೇ ಹೊರತು ದುರ್ಗುಣಗಳ ಕಡೆಗೆ ಲಕ್ಷ್ಯಕೊಡಬಾರದು. ನಮ್ಮ ನಮ್ಮಲ್ಲಿ ಜಗಳವಾಡಿದರೆ ಪರರಿಗೆ ಆಸ್ಪದ ಸಿಕ್ಕಿ ಇಬ್ಬರೂ ಕೆಟ್ಟುಹೋಗುವೆವು. ಇಬ್ಬರ ಜಗಳ ಮೂರನೆಯವನಿಗೆ ಲಾಭ ಎಂಬುದನ್ನು ಜ್ಞಾಪಕದಲ್ಲಿಟ್ಟುಕೋ. ಈಗ ನಾವು ದ್ವೇಶಬುದ್ಧಿಯನ್ನು ತೋರಿಸದೆ ನಮ್ಮ ಜ್ಞಾತಿಗಳನ್ನು ಬಿಡಿಸಿಕೊಂಡು ಬರುವುದು ಅಗತ್ಯವು ಎಂದು ಹೇಳಿದನು. ಆದರೂ ಅವನ ಮನಸ್ಸು ಸಮಾಧಾನವಾಗಲಿಲ್ಲ. ಬಳಿಕ ಆತನು ಅರ್ಜುನನನ್ನು ನೋಡಿ "ತಮ್ಮಾ! ನೀನೇ ಹೋಗಿ ದುರ್ಯೋಧನಾದಿಗಳನ್ನು ಬಿಡಿಸಿ ಕರೆದುಕೊಂಡು ಬಾ" ಎಂದು ನೇಮಿಸಿದನು. ಆಗ ಅರ್ಜುನನು ಎದುರುವಾದಿಸದೆ ಆತನ ಅಪ್ಪಣೆಯಂತೆ ಹೊರಟು ದುರ್ಯೋಧನಾದಿ ಶತ್ರುಗಳನ್ನು ಹಿಡಿದುಕೊಂಡು ಹೋಗುತ್ತಲಿದ್ದ ಗಂಧರ್ವನನ್ನು ತಡೆದು ನಿಲ್ಲಿಸಿ ಅವನೊಂದಿಗೆ ಕಾದಿ ಸೆರೆಸಿಕ್ಕಿದ್ದವರನ್ನೆಲ್ಲಾ ಬಿಡಿಸಿಕೊಂಡು ಬಂದು ಯುಧಿಷ್ಠಿರನಿಗೆ ಒಪ್ಪಿಸಿದನು. ಆಗಲಾ ಧರ್ಮರಾಯನು ಅವನನ್ನು ಮನ್ನಿಸಿ ತಮ್ಮಾ! ಚಕ್ರವರ್ತಿಯಾದ ನೀನು ನಿನ್ನ ಪದವಿಗೆ ತಕ್ಕಂತೆ ನಿನ್ನ ಗೌರವವನ್ನು ಕಾಪಾಡಿಕೊಳ್ಳಬೇಕು. ಮುಂದಿನ ಆಲೋಚನೆಯಿಲ್ಲದೆ ಇಂತಹ ಕೆಲಸಗಳಿಗೆ ನೀನು ದುಡುಕಿ ಹೋಗಬೇಡ. ಆತುರಗೊಂಡು ಹೀಗೆ ಮಾಡಿದರೆ ನಿನ್ನ ಕುಲವೇ ನಾಶವಾಗುವುದು. ಇಂತಹ ದಾರಿ ತುಳಿಯದೆ ಸನ್ಮಾರ್ಗದಿಂದ ಪ್ರವರ್ತಿಸಿ ನಮ್ಮ ಮನೆತನದ ಹೆಸರನ್ನು ಕಾಪಾಡಿಕೋ ಎಂದು ಬುದ್ಧಿ ಹೇಳಿ ಬಂದಿದ್ದವರಿಗೆಲ್ಲಾ ಔತಣ ಮಾಡಿಸಿ ಕಳುಹಿಸಿಕೊಟ್ಟನು.

ಪಾಂಡವರಿಗೆ ಕೇಡುಮಾಡಬೇಕೆಂದು ಉದ್ದೇಶಿಸಿಕೊಂಡು ಬಂದಿದ್ದ ಕುರುರಾಯನು ಗಂಧರ್ವನಿಗೆ ಸೆರೆಯಾಳಾಗಿ ವಿರೋಧಿಗಳಾದ ಪಾಂಡವರಿಂದಲೇ ತಾನು ರಕ್ಷಿಸಲ್ಪಟ್ಟದ್ದರಿಂದ ತನ್ನ ತಪ್ಪಿಗೆ ನಾಚಿಗೊಂಡು ತಲೆ

ಬಗ್ಗಿಸಿದನು. ಅವನ ಮುಖವು ಹೆಣದ ಮೋರೆಯಂತಿತ್ತು. ಬಾಯಿಂದ ಮಾತೇ ಹೊರಡದು. ಛೀ! ಛೀ! ನನ್ನ ಬಾಳು ವ್ಯರ್ಥವು! ಇಂತಹ ಅವಮಾನದಿಂದ ಜೀವಿಸಿರುವುದಕ್ಕಿಂತ ಪ್ರಾಣಬಿಡುವುದೇ ಲೇಸು ಎಂದು ತಿಳಿದನು. ಕೆಟ್ಟ ಮೋರೆ ಹಾಕಿಕೊಂಡು ಅಲ್ಲಿಂದ ಹೊರಟುಹೋದನು. ಶಕುನಿ, ಕರ್ಣ ಮೊದಲಾದ ದುರ್ಮಂತ್ರಿಗಳು ಅವನನ್ನು ಹುಡುಕಿಕೊಂಡು ಬಂದು ಕ್ಷೇಮಸಮಾಚಾರ ವಿಚಾರಿಸಿದರು. ದುರಹಂಕಾರಿಯಾದ ಕರ್ಣನು ಆತನನ್ನು ನೋಡಿ ಎಲೈ ರಾಜನೇ ನೀನೇಕೆ ಚಿಂತಿಸುತ್ತಿಯೆ? ನನಗೆ ಅಪ್ಪಣೆ ಕೊಟ್ಟರೆ ಅರ್ಜುನನನ್ನು ಈಗಲೇ ಕೊಂದು ಬರುವೆನು ಎಂದು ಒಣಜಂಭವನ್ನು ಕೊಚ್ಚಿಕೊಂಡನು. ಇಂತಹ ಬೋಳಾ ಬಾಯಿಗಳ ಮಾತುಗಳನ್ನು ನಂಬಿಯೇ ದುರ್ಯೋಧನನು ಕೆಟ್ಟುಹೋದನು.

---

## ಹತ್ತನೆಯ ಪಾಠ.

ದುರ್ಯೋಧನನು ಖಿನ್ನನಾಗಿ ಊರು ಸೇರಿದ ಮೇಲೆ ಶತ್ರುಗಳನ್ನು ಹೇಗೆ ನಿಗ್ರಹಿಸಬೇಕೆಂಬ ಮನೋರೋಗವೇ ಹತ್ತಿಹೋಯಿತು. ಯಾವಾಗ ನೋಡಿದರೂ ಅವನು ಅವರ ಕೇಡನ್ನೇ ಹಾರೈಸುತ್ತಿದ್ದನು. ಒಂದಾನೊಂದು ದಿನ ದುರ್ವಾಸಮಹರ್ಷಿಯು ಕೌರವನ ಅರಮನೆಗೆ ಬಂದನು. ಆತನು ಸಾಮಾನ್ಯನಲ್ಲ, ಬಹು ತೀವ್ರವಾದ ಕೋಪವುಳ್ಳವನು. ಅವನ ಸಂಗಡ ಹತ್ತು ಸಾವಿರ ಮಂದಿ ಶಿಷ್ಯರು ಇದ್ದರು. ದುರ್ಯೋಧನನು ಅವರನ್ನೆಲ್ಲಾ ಉಚಿತರೀತಿಯಿಂದ ಸತ್ಕರಿಸಿ ಉಪಚಾರಮಾಡಿದನು. ಆ ಮಹರ್ಷಿಯು ಅವನ ಸೇವೆಗೆ ಸಂತೋಷಪಟ್ಟು ಆ ರಾಯನನ್ನು ನೋಡಿ ಎಲೈ ಕುರುಪತಿಯೆ ನಿನ್ನ ಸತ್ಕಾರದಿಂದ ಸಂತೋಷಗೊಂಡೆನು. ನಿನಗೆ ಬೇಕಾದ ಒಂದು ವರವನ್ನು ಬೇಡು ನೆರವೇರಿಸಿಕೊಡುವೆನು ಎಂದನು. ದುರ್ಯೋಧನನು ತನ್ನ ಮಂತ್ರಿಗಳೊಂದಿಗೆ ಯೋಚಿಸಿ ಆ ಮಹರ್ಷಿಯನ್ನು ನೋಡಿ ಸ್ವಾಮಿ ನೀವು ನಿಮ್ಮ ಶಿಷ್ಯರೂ ಪಾಂಡವರು ಇರುವ ಕಾಡಿಗೆ ಹೋಗಿ ಅರ್ಧರಾತ್ರಿಯ ವೇಳೆಯಲ್ಲಿ ನಮಗೆ ಭೋಜನವನ್ನು ಬಡಿಸಬೇಕೆಂದು ಬೇಡಿರಿ,

ಪಾಂಡವರಲ್ಲಿ ಆಗ ಏನೂ ಇರುವದಿಲ್ಲವಾದುದರಿಂದ ಅವಮಾನಗೊಂಡು ನಿಮ್ಮ ಕೋಪಕ್ಕೆ ಗುರಿಯಾಗುವರು. ಆಗ ಅವರಿಗೆ ಶಾಪಕೊಟ್ಟು ಬಂದರೆ ಅದೇ ನನಗೆ ಪರಮಾನುಗ್ರಹವು ಎಂದು ಪ್ರಾರ್ಥಿಸಿದನು. ದುರ್ವಾಸನು ಅದಕ್ಕೆ ಸಮ್ಮತಿಸಿ ಶಿಷ್ಯರನ್ನು ಕರೆದುಕೊಂಡು ಹೊರಟನು.

ಹೊತ್ತು ಮುಳುಗಿತು. ಲೋಕವನ್ನೆಲ್ಲಾ ಕತ್ತಲೆ ಕವಿಯಿತು. ಎತ್ತ ನೋಡಿದರೂ ಕಣ್ಣೇ ಕಾಣಿಸದು. ಹಕ್ಕಿಗಳೆಲ್ಲಾ ಗೂಡುಗಳಲ್ಲಿ ಮಲಗಿ ನಿದ್ದೆ ಮಾಡುತ್ತಲಿವೆ. ಜನರಲ್ಲಿ ಒಬ್ಬರಾದರೂ ಎಚ್ಚರವಾಗಿಲ್ಲ. ಕಾಡು ಮೃಗಗಳೂ ನರಿಗಳೂ ಮಾತ್ರ ಒಂದೊಂದು ಕಡೆ ಅರಚಿಕೊಳ್ಳುತ್ತಿವೆ. ಪಾಂಡವರೆಲ್ಲಾ ಊಟಮಾಡಿ ಮಲಗಿದ್ದಾರೆ. ದ್ರೌಪದಿಯು ಯಾರಾದರೂ ಅತಿಥಿಗಳು ಬಂದಾರೆಂದು ನಿರೀಕ್ಷಿಸಿ, ಯಾರೂ ಬಾರದ್ದರಿಂದ ತಾನೂ ಊಟಮಾಡಿ ಮಲಗಿಕೊಂಡಳು. ಅರ್ಧ ರಾತ್ರಿ ಕಳೆಯಿತು. ಆ ವೇಳೆಗೆ ಸರಿಯಾಗಿ ಮಹರ್ಷಿಯು ತನ್ನ ಶಿಷ್ಯರೊಂದಿಗೆ ಜಯ ಪರಮೇಶ್ವರಾ! ಎಂದು ಆ ಕಾಡಿಗೆ ಬಂದು ಪಾಂಡವರ ಆಶ್ರಮಕ್ಕೆ ಸೇರಿದನು. ಅವರ ಗದ್ದಲವನ್ನು ಕೇಳಿ ಪಾಂಡವರು ಎಚ್ಚತ್ತರು. ಯುಧಿಷ್ಠಿರನು ಆ ಮಹರ್ಷಿಯನ್ನು ಎದುರುಗೊಂಡು ಉಚಿತರೀತಿಯಿಂದ ಕುಶಲ ಪ್ರಶ್ನೆಗಳನ್ನು ಮಾಡಿ ಅರ್ಘ್ಯ ಪಾದ್ಯಾದಿಗಳಿಂದ ಉಪಚರಿಸಿದನು. ಆಗಲಾ ಮುನಿಯು ರಾಜನನ್ನು ನೋಡಿ ಯುಧಿಷ್ಠಿರಾ! ಮೂರು ದಿನಗಳಿಂದ ನನಗೆ ಊಟವಿಲ್ಲ, ಹಸಿವು ಬಹಳ ಬಾಧಿಸುತ್ತಿದೆ ಕೂಡಲೇ ನಮಗೆಲ್ಲಾ ಭೋಜನಕ್ಕೆ ಸಿದ್ಧಮಾಡು! ಹೊಳೆಗೆ ಹೋಗಿ ಮಿಂದು ಮಡಿಯುಟ್ಟುಕೊಂಡು ಬರುವೆವು ಎಂದು ಹೇಳಿದನು. ಧರ್ಮರಾಯನು ಸ್ವಾಮಿಯ ಅಪ್ಪಣೆಯಂತೆ ನಡೆಯುವೆನು. ತಾವು ಹೋಗಿ ಜಾಗ್ರತೆಯಲ್ಲಿ ಬರಬಹುದು ಎಂದು ಹೇಳಿ ಅವರನ್ನು ಕಳುಹಿಸಿಕೊಟ್ಟನು. ದುರ್ವಾಸ ಮುನಿಯು ತನ್ನ ಶಿಷ್ಯರನ್ನು ಕರೆದುಕೊಂಡು ಸ್ನಾನಕ್ಕೆ ಹೊರಟುಹೋದನು. ಇತ್ತ ಯುಧಿಷ್ಠಿರನು ತಮ್ಮಂದಿರೊಂದಿಗೆ ಯೋಚನೆ ಮಾಡುತ್ತಾ ಅಯ್ಯೋ! ಏನು ಕಷ್ಟ ಬಂದಿತು. ಈ ಅರ್ಧ ರಾತ್ರಿ ಹೊತ್ತಿನಲ್ಲಿ ಇಷ್ಟು ಮಂದಿ ಬ್ರಾಹ್ಮಣರಿಗೂ ಭೋಜನವನ್ನು ಎಲ್ಲಿಂದ ತಂದು

ಒದಗಿಸಬಲ್ಲೆವು? ಇವರನ್ನು ತೃಪ್ತಿಪಡಿಸದೆ ಹೋದರೆ ನಮ್ಮ ಗೌರವವು ಹಾಳಾಗುವುದು. ಈ ಮಹರ್ಷಿಯಾದರೋ ತೀವ್ರ ಕೋಪಿ, ನಮಗೆ ಶಾಪವನ್ನು ಕೊಟ್ಟು ಕುಲವನ್ನೇ ಹಾಳುಮಾಡುವನು. ಏನು ಮಾಡೋಣ ಎಂದು ಚಿಂತಿಸುತ್ತಿದ್ದನು. ಅವರಿಗೆ ದಿಕ್ಕೇ ತೋರಲಿಲ್ಲ. ಆಗ ದ್ರೌಪದಿಯು ತನ್ನ ಮನಸ್ಸಿನಲ್ಲಿ ಶ್ರೀಕೃಷ್ಣನನ್ನು ಧ್ಯಾನಿಸಿ ಎಲೈ ದೀನದಯಾಳುವೇ! ಆಪದುದ್ಧಾರಕ! ಶ್ರೀಕೃಷ್ಣಾ! ಪರಮಾತ್ಮ! ಚಿಕ್ಕಂದಿನಿಂದಲೂ ಪಾಂಡವರಿಗೆ ಯಾವ ಸಂಕಟವೂ ಬಾರದಂತೆ ಕಾಪಾಡಿದೆ. ಅಂದು ಸಭೆಯಲ್ಲಿ ಕೌರವರು ನನ್ನ ಮಾನಭಂಗಮಾಡುತ್ತಿದ್ದಾಗ ನೀನೇ ನನ್ನನ್ನು ರಕ್ಷಿಸಿದೆ. ಇಂಥಾ ಕಷ್ಟಕಾಲದಲ್ಲಿ ನೀನೇ ನಮಗೆ ರಕ್ಷಕನಾಗಬೇಕು., '**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ । ತಸ್ಮಾತ್ ಕಾರುಣ್ಯ ಭಾವೇನ ರಕ್ಷ ರಕ್ಷ ಜಗತ್ಪತೇ**''

ಈ **ದುರ್ವಾಸ**ಮುನಿಯು ತನ್ನ ಪರಿವಾರದೊಂದಿಗೆ ಬಂದು ನಮ್ಮ ಶಕ್ತಿಯನ್ನು ಕುಗ್ಗಿಸಬೇಕೆಂದಿದ್ದಾನೆ. ಇಲ್ಲಿ ನಮಗೆ ದಿಕ್ಕೇ ತೋರದು. ಎಲೈ ಆತ್ಮರಕ್ಷಾಮಣಿ! ನಮ್ಮನ್ನು ಈ ವಿಪತ್ತಿನಿಂದ ತಡೆಹಾಯಿಸು ಎಂದು. ಪ್ರಾರ್ಥಿಸಿದಳು. ಆ ಕ್ಷಣದಲ್ಲಿಯೇ ಶ್ರೀಕೃಷ್ಣನು ಅಲ್ಲಿಗೆ ಬಂದು, ಆಕೆಗೆ ಪ್ರತ್ಯಕ್ಷನಾಗಿ ತಂಗೀ! ನನಗೆ ಬಹಳ ಹಸಿವಾಗುತ್ತಿದೆ, ತಿನ್ನುವುದಕ್ಕೆ ಏನಾದರೂ ಇದ್ದರೆ ಕೊಡು ಎಂದು ಅವಳನ್ನು ಬೇಡಿದನು. ಅದಕ್ಕೆ ಅವಳು ''ಅಣ್ಣಯ್ಯಾ! ಅಯ್ಯೋ! ನಮ್ಮಲ್ಲಿ ಏನೂ ಇಲ್ಲವಲ್ಲಾ'' ಎಂದು ಅತ್ತಳು. ದ್ರೌಪದೀ ನೀವು ಭೋಜನ ಮಾಡಿ ಉಳಿದದ್ದು ಏನಾದರೂ ಇದೆಯೋ? ಇಲ್ಲವೋ? ಪಾತ್ರೆಯಲ್ಲಿ ಹುಡುಕಿ ನೋಡು ಎಂದನು. ಅವಳು ಒಳಕ್ಕೆ ಹೋಗಿ ತಾನು ಅಡಿಗೆಮಾಡಿದ ಪಾತ್ರೆಗಳನ್ನೆಲ್ಲಾ ತಂದು ಶ್ರೀಕೃಷ್ಣನ ಮುಂದಿಟ್ಟಳು. ಅಕ್ಷಯಪಾತ್ರೆಯ ಒಂದು ಮೂಲೆಯಲ್ಲಿ ಸೊಪ್ಪಿನ ಚೂರು ಒಂದು ಹತ್ತಿಕೊಂಡಿತ್ತು. ಶ್ರೀಕೃಷ್ಣನು ಆ ಸೊಪ್ಪನ್ನೇ ತೆಗೆದುಕೊಂಡು ಸಂತೋಷದಿಂದ ಭಕ್ಷಿಸಿ ಬಲವಾಗಿ ತೇಗಿದನು. ಅಷ್ಟರಲ್ಲಿ ಭೋಜನ ಪದಾರ್ಥಗಳೆಲ್ಲವೂ ದೈವಮಹಿಮೆಯಿಂದ ಸಿದ್ಧವಾದವು. ಮಹರ್ಷಿಯು ಯಾವಾಗ ಬರುವನೋ ಎಂದು ಎಲ್ಲರೂ ನಿರೀಕ್ಷಿಸುತ್ತಲಿದ್ದರು.

ಅತ್ತ ಸ್ನಾನಾರ್ಥವಾಗಿ ನದಿಗೆ ಹೋಗಿದ್ದ ದುರ್ವಾಸನು ಸ್ನಾನ ಮಾಡಿ ತೀರದೇಶಕ್ಕೆ ಬಂದು ಔತಣದ ಊಟವನ್ನು ಉಂಡವನಂತೆ ತೇಗುಗಳನ್ನು ಬಿಡತೊಡಗಿದನು. ಅವನಿಗೂ ಅವನ ಶಿಷ್ಯರಿಗೂ ಹೊಟ್ಟೆ ತುಂಬಿಹೋಗಿ ಹಸಿವು ಅಡಗಿಬಿಟ್ಟಿತು. ಎಲ್ಲರೂ ತೇಗಿದರು. ಇನ್ನು ಪಾಂಡವರ ಬಳಿಗೆ ಹೋಗಿ ಏನು ಭಕ್ಷಿಸಬೇಕು? ಆ ಮುನಿಯು ಆಶ್ಚರ್ಯದಿಂದ ತನ್ನಲ್ಲಿ ಇದೇನೋ ದೇವಮಾಯೆಯಾಗಿದೆ. ನಮ್ಮ ಹಸಿವೇನೋ ಅಡಗಿಹೋಯಿತು. ಪಾಂಡವರಿಗೆ ಅವಮಾನಮಾಡಬೇಕೆಂದು ಬಂದೆವು, ನಾವೇ ಅವಮಾನಪಟ್ಟು ಓಡಿಹೋಗಬೇಕಾಗಿದೆ. ಈಗ ಅವರನ್ನು ಕಾಣಿಸಿಕೊಳ್ಳುವುದರಲ್ಲಿ ಗುಣವಿಲ್ಲ ಎಂದು ನಿಶ್ಚಯಿಸಿ ಅವರಿಗೆ ಹೇಳದೆ ಕೇಳದೆ ತನ್ನ ಶಿಷ್ಯರೊಂದಿಗೆ ಓಡಿಹೋದನು. ಬಹಳ ಹೊತ್ತಿನ ತನಕ ನೋಡಿ ಪಾಂಡವರು ಶ್ರೀಕೃಷ್ಣನನ್ನು ಕುರಿತು "ಸ್ವಾಮಿ ಋಷಿಯು ತನ್ನ ಶಿಷ್ಯರೊಂದಿಗೆ ಇನ್ನೂ ಏತಕ್ಕೆ ಬಂದಿಲ್ಲವೋ?" ಎಂದು ಕೇಳಿದರು. ಅದಕ್ಕಾತನು ತಾನು ಮಾಡಿದ ತಂತ್ರವನ್ನು ಅವರಿಗೆ ತಿಳಿಸಿದನು. ಪಾಂಡವರನ್ನು ಕೆಡಿಸಬೇಕೆಂದು ಯೋಚಿಸಿದ್ದ ದುರ್ಯೋಧನನ ಸಂಕಲ್ಪವು ಭಗ್ನವಾಯಿತು. ದುರ್ವಾಸನೇ ಅವಮಾನಹೊಂದಿ ಓಡಿಹೋದನು. ಪಾಂಡವರಿಗೆ ಸಂಭವಿಸಿದ ಈ ವಿಪತ್ತು ಕೃಷ್ಣಾನುಗ್ರಹದಿಂದ ಪರಿಹಾರವಾಯಿತು.

ಒಂದು ದಿನ ಪಾಂಡವರು ಬೇಟೆ ಆಡುವುದಕ್ಕೆ ಮತ್ತೊಂದು ಕಾಡಿಗೆ ಹೋಗಿದ್ದರು. ಪಾಕಶಾಲೆಯಲ್ಲಿ ದ್ರೌಪದಿಗೆ ಸಹಾಯಕರಾಗಿ ಇದ್ದ ಋಷಿಗಳು ಸ್ನಾನಮಾಡುವುದಕ್ಕೆ ನದಿಗೆ ಹೋಗಿದ್ದರು. ಆ ವೇಳೆಯನ್ನು ನೋಡಿಕೊಂಡಿದ್ದ, ದುಸ್ಸಳೆಯ ಗಂಡನಾದ **ಜಯದ್ರಥ**ನು ದುರ್ಯೋಧನನ ಆಜ್ಞೆಯಿಂದ ಆಕೆಯನ್ನು ಹಿಡಿದುಕೊಂಡು ಹೋಗಬೇಕೆಂದು ಪಾಂಡವರಿದ್ದ ಆಶ್ರಮಕ್ಕೆ ಬಂದನು. ಅವನು ಒಬ್ಬೊಂಟಿಗಳಾಗಿದ್ದ ದ್ರೌಪದಿಯನ್ನು ನೋಡಿ ಆಕೆಯನ್ನು ಬಲಾತ್ಕಾರದಿಂದ ತನ್ನ ರಥದ ಮೇಲೆ ಕುಳ್ಳಿರಿಸಿಕೊಂಡು ತೇರನ್ನು ಓಡಿಸಲಾರಂಭಿಸಿದನು. ದ್ರೌಪದಿಯು "ಅಣ್ಣಾ! ನಿನಗೆ ಇದು ತರವಲ್ಲ, ನನ್ನನ್ನು ಬಿಟ್ಟುಬಿಡೆ"ಂದು ಹಲವು ಬಗೆಯಿಂದ ಬೇಡಿದಳು, ಹಲುಬಿದಳು, ದೀನಸ್ವರದಿಂದ ಅತ್ತಳು, ಆ ನೀಚನಿಗೆ ಕರುಣಹುಟ್ಟಲಿಲ್ಲ.

ದಾರಿಯಲ್ಲಿ ಪಾಂಡವರು ಹಿಂದಿರುಗಿ ಬರುತ್ತಿದ್ದರು. ಅವರು ಅವಳ ಆರ್ತ ಧ್ವನಿಯನ್ನು ಕೇಳಿ ಓಡಿ ಬಂದರು. ಜಯದ್ರಥನು ಅವರನ್ನು ಕಂಡು ಹೆದರಿ ದ್ರೌಪದಿಯನ್ನು ರಥದಿಂದ ಕೆಡಹಿ, ಓಡಿಹೋದನು. ಭೀಮಾರ್ಜುನರಿಗೆ ಬಹಳ ಸಿಟ್ಟು ಬಂದಿತು. ಅವರು ಆ ದ್ರೋಹಿಯನ್ನು ಹಿಡಿದುಕೊಂಡು ಬಂದು ಧರ್ಮರಾಯನ ಕಾಲಿನ ಮೇಲೆ ಕೆಡವಿದರು. ಆ ರಾಜನು ಅವನಿಗೆ ಮೃದುವಾಕ್ಯಗಳಿಂದ ಬುದ್ಧಿ ಹೇಳಿ ಕಳುಹಿಸಿಬಿಟ್ಟನು. ಬಳಿಕ ಜಯ ದ್ರಥನು ಅವಮಾನಗೊಂಡು ಒಂದು ಪರ್ವತದ ಮೇಲೆ ಹೋಗಿ ಕುಳಿತು, ಈಶ್ವರನನ್ನು ಕುರಿತು ತಪಸ್ಸುಮಾಡಿದನು. ಮಹಾದೇವನು ಪ್ರತ್ಯಕ್ಷನಾಗಿ ನಿನಗೆ ಬೇಕಾದ ವರಗಳನ್ನು ಕೇಳಿಕೋ ಕೊಡುವೆನು ಎಂದನು. ಒಂದೇ ದಿನ ನಾನು ಪಾಂಡವರನ್ನೆಲ್ಲಾ ಗೆಲ್ಲುವಂತೆ ಅನುಗ್ರಹಿಸಬೇಕೆಂದು ಆತನು ಪ್ರಾರ್ಥಿಸಿದನು. ಅರ್ಜುನನೊಬ್ಬನನ್ನು ಹೊರತು ಉಳಿದ ನಾಲ್ವರನ್ನೂ ನೀನು ಒಂದು ದಿನ ಗೆಲ್ಲುವೆ ಹೋಗಿ ಬಾರೆಂದು ಈಶ್ವರನು ವರವನ್ನು ಕೊಟ್ಟು ಕಳುಹಿಸಿಬಿಟ್ಟನು.

ಕರ್ಣನು ಅರ್ಜುನನಿಗೆ ಸಮುಕಕ್ಷಿಯಾಗಿದ್ದನು. ನಾನು ಅರ್ಜುನ ನನ್ನು ಕೊಂದುಹಾಕುವೆನು, ಅಥವಾ ಅವನ ಬಾಣಗಳಿಂದ ನಾನು ಸಾಯು ವೆನು ಎಂಬುದೇ ಅವನ ಸಂಕಲ್ಪ. ಅರ್ಜುನನು ಇಂದ್ರನ ಅಂಶದಿಂದ ಹುಟ್ಟಿದವನು; ಕರ್ಣನು ಸೂರ್ಯನ ಅಂಶದಿಂದ ಹುಟ್ಟಿದವನು. ಇಬ್ಬರೂ ಸಮಾನ ಬಲವುಳ್ಳವರು. ಅರ್ಜುನನು ಇಂದ್ರನಿಗಾಗಿ ಹಲವು ಸಾರಿ ರಾಕ್ಷಸರನ್ನು ಕೊಂದು ಆತನಿಗೆ ಸಹಾಯಮಾಡಿದ್ದನು. ಇಂದ್ರನು ಅವ ನನ್ನು ರಕ್ಷಿಸುವುದಕ್ಕೆ ಉಪಾಯವೇನೆಂದು ಯೋಚಿಸಿದನು. ಆ ಕರ್ಣನಿಗೆ ಹುಟ್ಟಿದಾಗಲೇ ಸೂರ್ಯನು ಸಹಜವಾದ ಕವಚಕುಂಡಲಗಳನ್ನು ಕೊಟ್ಟಿ ದ್ದನು. ಆ ಕವಚವು ಮೈಮೇಲಿರುವ ತನಕ ಎಂತಹ ಬಾಣಗಳಾದರೂ ಅವನಿಗೆ ತಗಲವು. ಕರ್ಣಕುಂಡಲಗಳು ಕೂಡ ಶತ್ರುಗಳಿಗೆ ಅಭೇದ್ಯವಾಗಿ ಆತನ ಸಾಹಸವನ್ನು ಹೆಚ್ಚಿಸುತ್ತಿದ್ದವು. ಈ ಕಾರಣಗಳಿಂದ ಅವನನ್ನು ಜಯಿಸಲು ಯಾರಿಂದಲೂ ಆಗುತ್ತಿರಲಿಲ್ಲ. ಇವೆರಡನ್ನೂ ಉಪಾಯದಿಂದ ಅಪಹರಿಸಿದರೆ ಆ ಕರ್ಣನ ಶಕ್ತಿಯು ಕುಗ್ಗಿಹೋಗಿ ಅರ್ಜುನನಿಗೆ ಅನು

ಕೂಲವಾಗುವುದೆಂದು ದೇವೇಂದ್ರನು ತಿಳಿದನು. ಅವನು ಬ್ರಾಹ್ಮಣ ವೇಷವನ್ನು ಧರಿಸಿ ಕರ್ಣನ ಬಳಿಗೆ ಬಂದನು. ಕರ್ಣನು ಮಹಾ ತ್ಯಾಗಿ, ತನ್ನಲ್ಲಿದ್ದ ವಸ್ತುವನ್ನು ಯಾರಾದರೂ ಬಂದು ಬೇಡಿದರೆ ಇಲ್ಲವೆಂಬ ಅಭ್ಯಾಸವೇ ಅವನಲ್ಲಿರಲಿಲ್ಲ. ತನ್ನಲ್ಲಿಗೆ ಬಂದ ಬ್ರಾಹ್ಮಣನನ್ನು ನೋಡಿ, ಆತನನ್ನು ಕುರಿತು ಅಯ್ಯಾ ವಿಪ್ರೋತ್ತಮನೇ! ನಿನಗೆ ಏನು ಬೇಕೆಂದು ಕೇಳಿದನು. ಅದಕ್ಕೆ ಆ ವೇಷಧಾರಿಯು ಎಲೈ ಉದಾರಿಯೇ! ನಿನ್ನ ಕವಚವನ್ನೂ ಕುಂಡಲವನ್ನೂ ಕೊಡು ಎಂದು ಪ್ರಾರ್ಥಿಸಿದನು. ಕರ್ಣನು ಅದಕ್ಕೆ ಪ್ರತಿ ಹೇಳದೆ ಅವನು ಬೇಡಿದ ವಸ್ತುಗಳನ್ನು ತೆಗೆದು ಬ್ರಾಹ್ಮಣನ ಕೈಗೆ ಕೊಟ್ಟನು. ಅದನ್ನು ತೆಗೆದ ಕೂಡಲೇ ಕರ್ಣನ ಬಲವು ತಗ್ಗಿತು. ಕಾಂತಿಯು ಕಳೆಗುಂದಿತು. ಇದನ್ನು ಕೇಳಿ ದುರ್ಯೋಧನನು ಬಹು ದುಃಖಿಸಿದನು. ಪಾಂಡವರು ಸಂತೋಷಗೊಂಡರು. ಇವನ ದಾತೃತ್ವಕ್ಕೆ ಮೆಚ್ಚಿ ದೇವೇಂದ್ರನು ಇವನಿಗೆ ತನ್ನಲ್ಲಿದ್ದ ಶಕ್ತಿ ಎಂಬ ಆಯುಧವನ್ನು ಕೊಟ್ಟು ಹೊರಟುಹೋದನು.

ಮುಂದೆ ಪಾಂಡವರು ಕಾಮ್ಯಕವನವನ್ನು ಬಿಟ್ಟು ದ್ವೈತಾರಣ್ಯಕ್ಕೆ ಹೋಗಿ ಅಲ್ಲಿಯೇ ಕೆಲವು ಕಾಲ ವಾಸಮಾಡಿಕೊಂಡಿದ್ದರು. ಒಂದಾನೊಂದು ದಿನ ಧರ್ಮರಾಯನಿಗೆ ಬಹು ದಾಹ ಉಂಟಾಯಿತು. ಅವನು ಸಹದೇವನನ್ನು ನೋಡಿ ತಮ್ಮಾ! ಹತ್ತಿರದಲ್ಲಿಯೆ ಇರುವ ಕೊಳಕ್ಕೆ ಹೋಗಿ ಕುಡಿಯಲಿಕ್ಕೆ ನೀರು ತೆಗೆದುಕೊಂಡು ಬಾ ಎಂದು ಅಪ್ಪಣೆಮಾಡಿದನು. ಅವನು ಸರೋವರಕ್ಕೆ ಹೋಗಿ ಅಲ್ಲಿ ಇಳಿದನು. ಆಗ ಒಬ್ಬ ಯಕ್ಷನು ಬಂದು ಅವನನ್ನು ತಡೆದು ತಮ್ಮಾ! ಈ ನೀರನ್ನು ಮುಟ್ಟಬೇಡ, ಈ ಕೊಳವು ನನ್ನದು. ನಾನು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಿ ಬಳಿಕ ನೀರು ಕುಡಿಯಪ್ಪಾ! ಏಂದನು. ಉರಿಬೇಸಿಗೆ, ನಾಲಿಗೆ ಒಣಗಿಹೋಗುತ್ತಲಿದೆ, ಅವನು ಯಕ್ಷನ ಮಾತನ್ನು ಲಕ್ಷ್ಯಮಾಡಲಿಲ್ಲ. ಆ ನೀರು ಕುಡಿದೇಬಿಟ್ಟನು, ಪ್ರಾಣಗಳು ಹೋದವು. ಬಹಳ ಹೊತ್ತಾದರೂ ಸಹದೇವನು ಬರಲಿಲ್ಲ. ಯುಧಿಷ್ಠಿರನು ಚಿಂತಾಕ್ರಾಂತನಾಗಿ ಸಹದೇವನನ್ನು ನೋಡಿ ಬಾರೆಂದು ನಕುಲನನ್ನು ಅಲ್ಲಿಗೆ ಕಳುಹಿದನು. ಅವನೂ ಸಹದೇವನಂತೆಯೇ ಯಕ್ಷನ ಮಾತನ್ನು ಕೇಳದೆ ನೀರು ಕುಡಿದು ಸತ್ತುಬಿದ್ದನು. ಆ ಮೇಲೆ ಧರ್ಮ

ರಾಯನು ಅರ್ಜುನನನ್ನು ಕಳುಹಿಸಿದನು. ಅವನೂ ಹಿಂದಿರುಗಲಿಲ್ಲ. ತರುವಾಯ ಭೀಮಸೇನನು ಬಂದನು. ಅವನ ಬೇಳೆಯೂ ಬೇಯದೆ ಹೋಗಿ ಅವನೂ ಮೃತನಾದನು. ನಾಲ್ವರು ತಮ್ಮಂದಿರೂ ಬಂದಿಲ್ಲ, ಏನಾದರೋ ಎಂದು ಚಿಂತಿಸಿ, ಯುಧಿಷ್ಠಿರನು ತಾನೇ ಸರೋವರದ ತೀರಕ್ಕೆ ಬಂದು ನೋಡಿದನು. ಅಲ್ಲಿ ತಮ್ಮಂದಿರೆಲ್ಲಾ ಸತ್ತುಬಿದ್ದಿದ್ದರು. ಅವರನ್ನು ನೋಡಿ ದುಃಖದಿಂದ ಆತನು ಗಟ್ಟಿಯಾಗಿ ರೋಧನಮಾಡಿದನು. ಅಷ್ಟರಲ್ಲಿ ಯಕ್ಷನು ಆತನ ಎದುರಿಗೆ ಬಂದು, ಅಯ್ಯಾ! ಪ್ರಜ್ಞಾನಿಧಿಯೆ ನಿನ್ನ ತಮ್ಮಂದಿರು ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡದೆ, ದುಡುಕಿ, ನೀರು ಕುಡಿದುದರಿಂದ ತಮ್ಮ ಪ್ರಾಣಗಳನ್ನು ಕಳೆದುಕೊಂಡರು. ನೀನೂ ಹಾಗೆ ಮಾಡಿ ಕೆಡಬೇಡ. ನನ್ನ ಪ್ರಶ್ನೆಗಳಿಗೆ ಮೊದಲು ಉತ್ತರಗಳನ್ನು ಕೊಟ್ಟು, ಬಳಿಕ ನೀರು ಕುಡಿ ಎಂದು ಹೇಳಿ, ಆತನಿಗೆ ಪ್ರಶ್ನೆಗಳನ್ನು ಹಾಕಿದನು. ಆ ಪ್ರಶ್ನೆಗಳನ್ನೂ ಅವುಗಳಿಗೆ ಯುಧಿಷ್ಠಿರನು ಕೊಟ್ಟ ಉತ್ತರಗಳನ್ನೂ ಓದಿದರೆ ನಿಮಗೆ ಅವನ ಲೋಕವ್ಯವಹಾರ ಜ್ಞಾನವು ಗೊತ್ತಾಗುವುದು.

**ಯಕ್ಷ** :—ಸನಾತನ ಧರ್ಮವು ಯಾವುದು?

**ಯುಧಿ**:—ಮೋಕ್ಷ ಧರ್ಮವು.

**ಯಕ್ಷ** :—ಕೀರ್ತಿ ಯಾವುದರಿಂದ ಉಂಟಾಗುವುದು?

**ಯುಧಿ**:—ದಾನ ಮಾಡುವುದರಿಂದ.

**ಯಕ್ಷ** :—ಸ್ವರ್ಗ ಪ್ರಾಪ್ತಿಗೂ, ಸುಖ ಸಂಪಾದನೆಗೂ ಸಾಧನಗಳು ಯಾವುವು?

**ಯುಧಿ**:—ಸತ್ಯ, ಸದಾಚಾರ ಇವೇ ಮುಖ್ಯ ಸಾಧನೆಗಳು.

**ಯಕ್ಷ** :—ದ್ರವ್ಯ ಸಂಪಾದನೆಗೆ ಒಳ್ಳೇಯ ಮಾರ್ಗವಾವುದು?

**ಯುಧಿ**:—ಒಳ್ಳೇಯ ಮನಸ್ಸು ಎಚ್ಚರಿಕೆ, ತಾನು ಮಾಡುವ ಸತ್ಕರ್ಮ.

**ಯಕ್ಷ** :—ಉತ್ತಮವಾದ ಧನವಾವುದು?

**ಯುಧಿ**:—ವಿದ್ಯಾಧನವು.

**ಯಕ್ಷ :**— ಲಾಭಗಳಲ್ಲಿ ಶ್ರೇಷ್ಠವಾವುದು?

**ಯುಧಿ:**— ಆರೋಗ್ಯ ಲಾಭ.

**ಯಕ್ಷ :**— ಉತ್ತಮವಾದ ಸುಖವಾವುದು?

**ಯುಧಿ:**— ಸಂತೋಷವೇ ಉತ್ತಮವಾದ ಸುಖವು.

**ಯಕ್ಷ :**— ಧರ್ಮದಲ್ಲಿ ಶ್ರೇಷ್ಠವಾದುದು ಯಾವುದು?

**ಯುಧಿ:**— ದಯಾಗುಣವು.

**ಯಕ್ಷ :**— ದುಃಖವನ್ನು ತಪ್ಪಿಸಿಕೊಳ್ಳಬೇಕಾದರೆ ಏನು ಮಾಡಬೇಕು?

**ಯುಧಿ:**— ಮನಸ್ಸನ್ನು ನಿಗ್ರಹಿಸಬೇಕು.

**ಯಕ್ಷ:** — ಯಾರೊಂದಿಗೆ ಸ್ನೇಹಮಾಡಿದರೆ ಕೆಡದೆ ಇರುವನು?

**ಯುಧಿ:**— ಸಜ್ಜನರೊಂದಿಗೆ.

**ಯಕ್ಷ :**— ಮನುಷ್ಯನು ಉತ್ತಮನೆನಿಸಿಕೊಳ್ಳಬೇಕಾದರೆ ಯಾವುದನ್ನು ಬಿಡಬೇಕು?

**ಯುಧಿ:**— ಅಹಂಕಾರವನ್ನು ಬಿಡಬೇಕು.

**ಯಕ್ಷ :**— ಮನುಷ್ಯನು ಸುಖಪಡಬೇಕಾದರೆ ಯಾವುದನ್ನು ಬಿಡಬೇಕು?

**ಯುಧಿ:**— ಲೋಭವನ್ನು.

**ಯಕ್ಷ :**— ತಪಸ್ಸು, ದಮೆ, ಕ್ಷಮೆ, ಲಜ್ಜೆ, ಜ್ಞಾನ, ಶಮೆ, ದಯೆ, ಸರಳತೆ ಇವುಗಳ ಅರ್ಥವೇನು?

**ಯುಧಿ:**— ಸ್ವಧರ್ಮಗಳನ್ನು ಬಿಡದೆ ಅನುಸರಿಸುವುದೇ ತಪಸ್ಸು, ಮನಸ್ಸನ್ನು ನಿಗ್ರಹಿಸುವುದೇ ದಮೆ, ಸುಖವನ್ನೂ ದುಃಖವನ್ನೂ ಸಹಿಸಿಕೊಂಡು ಮೌನದಿಂದಿರುವುದೇ ಕ್ಷಮೆ, ಕೆಟ್ಟ ಕೆಲಸಗಳನ್ನು ಮಾಡದೆ ಬಿಡುವುದೇ ಲಜ್ಜೆ, ಸತ್ಯವನ್ನು ತಿಳಿದುಕೊಳ್ಳುವುದೇ ಜ್ಞಾನವು, ಮನಸ್ಸನ್ನು ಸ್ಥಿರಪಡಿಸಿಕೊಳ್ಳುವುದೇ ಶಮೆ, ಎಲ್ಲರ ಕ್ಷೇಮವನ್ನೂ ಸೌಖ್ಯವನ್ನೂ ಕೋರುವುದೇ ದಯೆ, ಎಲ್ಲರಲ್ಲಿಯೂ ಸಮಭಾವದಿಂದಿರುವುದೇ ಸರಳತೆ.

**ಯಕ್ಷ** :— ಸಾಧು ಎಂಬುವನು ಯಾರು?

**ಯುಧಿ:**— ರಾತ್ರಿಯೂ, ಹಗಲೂ ಸರ್ವರನ್ನು ಸಲಹೆಂದು ದೇವರನು ಪ್ರಾರ್ಥಿಸುವವನು.

**ಯಕ್ಷ** :— ಮೋಹ, ಮಾನ, ಅಲಸತೆ, ಶೋಕ, ಸ್ಥೈರ್ಯ, ಧೈರ್ಯ, ಸ್ನಾನ, ದಾನ, ಬುದ್ಧಿವಂತ, ಮೂರ್ಖ, ಮತ್ಸರಿ, ಅಹಂಕಾರಿ, ಡಾಂಭಿಕನು, ದೈವ, ಪಶುವೃತ್ತಿ ಈ ಹೆಸರುಗಳನ್ನು ಉಳ್ಳವುಗಳ್ಯಾವುವು?

**ಯುಧಿ:**— ಧರ್ಮವನ್ನು ತಿಳಿಯದಿರುವುದೇ ಮೋಹವು, ಆತ್ಮ ಸಂಬಂಧವಾದ ಅಭಿಮಾನವೇ ಮಾನವು, ಧರ್ಮಾಚರಣೆಯನ್ನು ಬಿಡುವುದೇ ಅಲಸತೆ, ಅಜ್ಞಾನವೇ ಶೋಕವು, ಸ್ವಧರ್ಮದಲ್ಲಿ ನಿರತನಾಗಿರುವುದೇ ಸ್ಥೈರ್ಯವು, ಇಂದ್ರಿಯವನ್ನು ನಿಗ್ರಹಿಸುವುದೇ ಧೈರ್ಯವು, ಮನಸ್ಸಿನಲ್ಲಿರುವ ಕಳಂಕವನ್ನು ತೊರೆದುಬಿಡುವುದೇ ಸ್ನಾನವು, ಪ್ರಾಣಿಮಾತ್ರದವರನ್ನು ರಕ್ಷಿಸುವುದೇ ದಾನವು, ಇಂತದೇ ಧರ್ಮವೆಂದು ತಿಳಿದುಕೊಂಡವನೇ ಪ್ರಾಜ್ಞನು, ದೇವರನ್ನು ತಿಳಿಯಲಾರದವನೇ ಮೂರ್ಖನು, ಇಲ್ಲಸಲ್ಲದ ಸಂಕಟಗಳನ್ನು ಮನಸ್ಸಿಗೆ ತಂದಿಟ್ಟುಕೊಂಡು ಕೊರಗುವವನೇ ಮತ್ಸರ ಗೃಹಸ್ಥನು, ಎಷ್ಟು ಹೇಳಿದರೂ ಅಜ್ಞಾನವನ್ನು ಬಿಡದಿರುವವನೇ ಅಹಂಕಾರಿಯು, ಲೋಕಕ್ಕೆಲ್ಲಾ ತಿಳಿಯಗೊಡಿಸುವುದಕ್ಕಾಗಿ ಮೇಲೆ ಮೇಲೆ ಮಾತ್ರ ಧರ್ಮವನ್ನು ಅನುಸರಿಸುವವನೇ ಡಾಂಭಿಕನು, ದಾನಕ್ಕೆ ಫಲವೇ ದೈವವು, ಯಾವಾಗ ನೋಡಿದರೂ ಪರರನ್ನು ಸಿಂದಿಸುತ್ತಿರುವುದೇ ಪಶುವೃತ್ತಿ ಎನ್ನಿಸುವುದು.

**ಯಕ್ಷ** :— ಯಾವನು ಅಕ್ಷಯವಾದ ನರಕವನ್ನು ಹೊಂದತಕ್ಕವನು?

**ಯುಧಿ:**— ಬಡವನಾದವನನ್ನು ಮನೆಗೆ ಬಾರೆಂದು ಕರೆಯದೆಯೂ ಅವನಿಗೆ ಭಿಕ್ಷವನ್ನು ನೀಡದೆಯೂ, ಓಡಿಸಿಬಿಡುವವನೂ, ವೇದಗಳಲ್ಲಿಯೂ, ಧರ್ಮಶಾಸ್ತ್ರಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ, ದೇವತೆಗಳಲ್ಲಿಯೂ

ಉಚಿತ ರೀತಿಯಿಂದ ನಡೆಯುದವನೂ, ತನ್ನಲ್ಲಿ ದ್ರವ್ಯವಿದ್ದರೂ ಅದನ್ನು ಧರ್ಮಕಾರ್ಯಗಳಲ್ಲಿಯೂ, ಉತ್ತಮ ವ್ಯಾಪಾರಗಳಲ್ಲಿಯೂ ವಿನಿಯೋಗಪಡಿಸದೆ ಇರುವವನೂ ಅಕ್ಷಯವಾದ ನರಕ ಲೋಕಕ್ಕೆ ಗುರಿಯಾಗುವನು.

**ಯಕ್ಷ :**—ಕುಲ, ನಡತೆ, ವೇದಾಧ್ಯಯನ, ವೇದ, ಜ್ಞಾನ ಇವುಗಳಲ್ಲಿ ಏತರಿಂದ ನಿಜವಾದ ಬ್ರಾಹ್ಮಣ್ಯ ಉಂಟಾಗುವುದು?

**ಯುಧಿ:**—ಎಲೈ ಯಕ್ಷನೇ ನೀನು ಹೇಳಿದವುಗಳಲ್ಲಿ ಏತರಿಂದಲೂ ಬ್ರಾಹ್ಮಣ್ಯವು ಬರಲಾರದು. ಸದಾಚರಣವೇ ನಿಶ್ಚಯವಾದ ಬ್ರಾಹ್ಮಣತ್ವಕ್ಕೆ ಮೂಲವು, ಒಳ್ಳೆಯ ನಡತೆಯುಳ್ಳವನೇ ಶ್ರೇಷ್ಠನು, ನಾಲ್ಕು ವೇದಗಳನ್ನೂ ಅಭ್ಯಾಸಮಾಡಿದ್ದರೆ ಸದಾಚರಣೆ ಇಲ್ಲದವನು ಶೂದ್ರನಿಗಿಂತ ಕಡೆಯಾದವನೆಂದು ತಿಳಿಯತಕ್ಕದ್ದು.

ಯಕ್ಷನು ಯುಧಿಷ್ಠಿರನು ಕೊಟ್ಟ ಉತ್ತರಗಳಿಂದ ಸಂತುಷ್ಟನಾಗಿ ಆತನ ಕೋರಿಕೆಯಂತೆ ಅವನ ತಮ್ಮಂದಿರುಗಳನ್ನೆಲ್ಲಾ ಬದುಕಿಸಿಕೊಟ್ಟನು. ಆ ಯಕ್ಷನು ಯಾರು? ಅವನೇ ಯಮಧರ್ಮರಾಯನು. ಯುಧಿಷ್ಠಿರನು ಅವನನ್ನು ಕಂಡು ನಮಸ್ಕರಿಸಿ, ಆರ್ಯನೇ ನನ್ನ ಪ್ರತಿಜ್ಞೆಯಂತೆ ಅರಣ್ಯವಾಸವು ಇಂದಿನೊಂದಿಗೆ ಪೂರ್ತಿಯಾಯಿತು. ಇನ್ನು ಒಂದು ವರ್ಷಕಾಲ ಯಾರಿಗೂ ತಿಳಿಯದಂತೆ ಅಜ್ಞಾತವಾಸ ಮಾಡಬೇಕಾಗಿದೆ. ಅದನ್ನು ನಿರ್ವಿಘ್ನವಾಗಿ ಕೊನೆಗಾಣಿಸುವಂತೆ ದಯಮಾಡಿ ಅನುಗ್ರಹಿಸಬೇಕು ಎಂದು ಬೇಡಿಕೊಂಡನು. ಯಮಧರ್ಮರಾಯನು ಹಾಗೆಯೇ ಆಗಲೆಂದು ಹರಸಿ ಹೊರಟು ಹೋದನು.

---

## ಹನ್ನೊಂದನೆಯ ಪಾಠ.

ಮಕ್ಕಳಿರಾ! ಭಾರತದ ಮೂರು ಪರ್ವಗಳ ಕಥೆ ಮುಗಿಯಿತು. ನಾಲ್ಕನೆಯದಾದ ವಿರಾಟಪರ್ವದ ಕಥೆಯನ್ನು ಈಗ ಓದಬಹುದು:—

ಪಾಂಡವರು ಅಜ್ಞಾತವಾಸವನ್ನು **ವಿರಾಟರಾಯನ ಪಟ್ಟಣ**ದಲ್ಲಿ ಕಳೆದುದರಿಂದ ಈ ಭಾಗಕ್ಕೆ ವಿರಾಟ ಪರ್ವವೆಂದು ಹೆಸರು ಬಂದಿತು. ಈ ಪಟ್ಟಣಕ್ಕೆ ಮತ್ಸ್ಯನಗರವೆಂದು ಹೆಸರು.

ಪಾಂಡವರು ಯಮಧರ್ಮರಾಯನಿಂದ ಅಪ್ಪಣೆ ಪಡೆದುಬರುತ್ತಾ ವಿರಾಟರಾಯನ ಪಟ್ಟಣದಲ್ಲಿ ಒಂದು ವರ್ಷಕಾಲ ವಾಸಮಾಡಬೇಕೆಂದು ನಿಶ್ಚಯಿಸಿಕೊಂಡರು. ಅವರಲ್ಲಿ ಬಹುಶ್ರೇಷ್ಠವಾದ ಬಿಲ್ಲುಗಳೂ, ಬಾಣಗಳೂ ಶಸ್ತ್ರಾಸ್ತ್ರಗಳೂ ಇದ್ದವು. ಅವು ಇತರರ ಕೈಗೆ ಸಿಕ್ಕದೆ ಇರಬೇಕೆಂದು ಅವುಗಳನ್ನೆಲ್ಲಾ ಬಲವಾಗಿ ಕಟ್ಟಿ ಊರಿನ ಹತ್ತಿರ ಸ್ಮಶಾನ ಬಳಿಯಲ್ಲಿದ್ದ ಬನ್ನಿಮರದ ಮೇಲೆ ಕಟ್ಟಿಟ್ಟು ಅಲ್ಲಿಗೆ ಯಾರೂ ಹತ್ತದೆ ಇರುವಂತೆ ಒಂದು ಸತ್ತ ಹೆಣವನ್ನು ಅಡ್ಡವಾಗಿ ಬಿಗಿಸಿದರು. ಬಳಿಕ ಒಬ್ಬೊಬ್ಬರಾಗಿ ಒಂದೊಂದು ದಿನ ಆ ವಿರಾಟರಾಜನ ಸಭೆಗೆ ಹೋಗಿ ತಮಗೆ ಇಷ್ಟವಾದ ಒಂದೊಂದು ಉದ್ಯೋಗದಲ್ಲಿ ಸೇರಿಕೊಂಡು ಆ ರಾಯನ ಬಳಿ ಸೇವೆಮಾಡತೊಡಗಿದರು. ಯುಧಿಷ್ಠಿರನು **ಕಂಕಭಟ್ಟ**ನೆಂಬ ಹೆಸರಿಟ್ಟುಕೊಂಡು ತಾನು ಧರ್ಮಶಾಸ್ತ್ರಗಳಲ್ಲಿಯೂ ಪಗಡೆಯಾಡುವುದರಲ್ಲಿಯೂ ಪಂಡಿತನೆಂದು ಹೇಳಿ ಸನ್ಯಾಸಿ ವೇಷದಿಂದ ಆ ರಾಜನ ಅನುಗ್ರಹಕ್ಕೆ ಪಾತ್ರನಾಗಿ ಅವನ ಸಭೆಯಲ್ಲಿ ಗೌರವದಿಂದ ಜೀವಿಸುತ್ತಿದ್ದನು. ಮರುದಿನ ಭೀಮನು ಬಂದು ವಿರಾಟರಾಯನನ್ನು ಕಂಡು ತನ್ನ ಹೆಸರು **ವಲಲ**ನೆಂತಲೂ ಭೀಮಸೇನನ ಅಡಿಗೆಯ ಮನೆಯಲ್ಲಿ ಯಜಮಾನನಾಗಿದ್ದೆನೆಂತಲೂ ಮಲ್ಲಯುದ್ಧವನ್ನು ಚೆನ್ನಾಗಿ ಮಾಡಬಲ್ಲೆನೆಂತಲೂ ಹೇಳಿಕೊಳ್ಳಲು ರಾಯನು ಅವನನ್ನು ಬಾಣಸಿಗನನ್ನಾಗಿ ಸೇರಿಸಿಕೊಂಡನು. ಅರ್ಜುನನು ಸ್ವರ್ಗದಲ್ಲಿ ರಂಭೆಯಿಂದ ಬಂದ ಶಾಪವನ್ನು ಅನುಭವಿಸುವುದಕ್ಕೆ ಈ ಕಾಲವನ್ನು ಉಪಯೋಗಿಸಿಕೊಂಡು ನಪುಂಸಕ ವೇಷದಿಂದ ವಿರಾಟರಾಯನ ಹೆಂಡತಿಯ ಹತ್ತಿರಕ್ಕೆ ಬಂದು ತನ್ನ ಹೆಸರು **ಬೃಹನ್ನಳೆ** ಎಂತಲೂ ವಿರಾಟರಾಯನ ಮಗಳಾದ ಉತ್ತರೆಗೆ ನಾಟ್ಯ ವಿದ್ಯೆಗಳನ್ನು ಕಲಿಸ ಬಲ್ಲನೆಂತಲೂ ಹೇಳಿಕೊಂಡನು. ಆಕೆಯು ,ಅವನನ್ನು ಮನ್ನಿಸಿ ಅಂತಃಪುರದಲ್ಲಿ ತನ್ನ ಮಗಳಿಗೆ ಗುರುವಾಗಿ ವಿದ್ಯೆ ಕಲಿಸುವಂತೆ ನಿಯಮಿಸಿ ಕೊಂಡಳು. ನಕುಲನು **ದಾಮಗ್ರಂಥಿ** ಎಂಬ ಹೆಸರನ್ನಿಟ್ಟುಕೊಂಡು ರಾಜನ ಬಳಿಗೆ ಹೋಗಿ ತಾನು ಅಶ್ವವಿದ್ಯೆಯಲ್ಲಿ ನಿಪುಣನೆಂದು ತಿಳಿಸಿದನು. ದೊರೆಯು ಅವನನ್ನು ಮನ್ನಿಸಿ, ಕುದುರೇ ಲಾಯದ ಘನವೈದ್ಯನಾಗಿ ನೇಮಿಸಿಕೊಂಡನು. ಸಹದೇವನು **ತಂತ್ರಿಪಾಲ**ನೆಂದು

ಹೆಸರಿಟ್ಟುಕೊಂಡು ತಾನು ಪಶುವೈದ್ಯವನ್ನು ಚೆನ್ನಾಗಿ ಬಲ್ಲೆನೆಂತಲೂ ಜೀವನಕ್ಕೆ ಇಲ್ಲದ್ದರಿಂದ ತಕ್ಕ ವೇತನ ಕೊಡಿಸಿ ತನ್ನನ್ನು ಸೇವೆಗೆ ಇಟ್ಟುಕೊಳ್ಳಬೇಕೆಂತಲೂ ಬೇಡಿಕೊಳ್ಳಲು ಅರಸನು ಅವನನ್ನು ಮನ್ನಿಸಿ ಪಶುಶಾಲೆಯ ಅಧ್ಯಕ್ಷನನ್ನಾಗಿ ನೇಮಿಸಿದನು. ಇನ್ನು ಉಳಿದಿರುವವಳು ದ್ರೌಪದಿಯೊಬ್ಬಳೇ. ಆಕೆಯು **ಸೈರಂಧ್ರಿಯ** ವೇಷವನ್ನು ಧರಿಸಿ ಸುಧೇಷ್ಣಾ ದೇವಿಯ ಸಂಗಾತಿಯಾಗಿ ಆಕೆಯ ಸಮೀಪದಲ್ಲಿರುವುದಕ್ಕೆ ಒಪ್ಪಿಕೊಂಡಳು. ಆಕೆಯು ಒಬ್ಬರು ತಿಂದ ಪದಾರ್ಥದ ಎಂಜಲನ್ನು ತಾನು ತಿನ್ನುವುದಿಲ್ಲವೆಂತಲೂ, ಒಬ್ಬರ ಕಾಲನ್ನು ತೊಳೆಯುವುದಿಲ್ಲವೆಂತಲೂ ಮೊದಲೇ ರಾಣಿಯೊಂದಿಗೆ ಹೇಳಿ ಗೊತ್ತುಮಾಡಿಕೊಂಡೇ ಕೆಲಸಕ್ಕೆ ಸೇರಿಕೊಂಡಳು. ರಾಣಿಯು ಅದಕ್ಕೆ ಒಪ್ಪಿಕೊಂಡು ಅವಳನ್ನು ತನ್ನ ದಾಸಿಯಾಗಿ ಇಟ್ಟುಕೊಂಡಳು.

ಈ ರೀತಿಯಲ್ಲಿ ಪಾಂಡವರು ವಿರಾಟ ಸಭೆಯಲ್ಲಿ ಹತ್ತು ತಿಂಗಳು ಕಳೆದರು. ಇನ್ನು ಎರಡು ತಿಂಗಳು ಅವಧಿ ಉಳಿದಿತ್ತು. ಆ ಮಧ್ಯದಲ್ಲಿ ಒಂದುದಿನ ವಿರಾಟರಾಯನ ಹೆಂಡತಿಯ ತಮ್ಮನೂ ಅವನ ಸೇನಾಪತಿಯೂ ಆದ ಕೀಚಕನು ದ್ರೌಪದಿಯ ಸೌಂದರ್ಯವನ್ನು ನೋಡಿ ಮೋಹಿಸಿ ಅವಳನ್ನು ಕೆಣಕಿದನು. ಅಕೆಯು ಅವನ ಇಷ್ಟಕ್ಕೆ ಒಪ್ಪಲಿಲ್ಲ. ಅವನು ಅವಳನ್ನು ತುಂಬಿದ ಸಭೆಯಲ್ಲಿ ಬಾಧಿಸ ತೊಡಗಿದನು. ಯುಧಿಷ್ಠಿರಾದಿಗಳೆಲ್ಲ ಅದನ್ನು ನೋಡಿಕೊಂಡೇ ಇದ್ದರು. ಭೀಮನು ಬಲು ಕೋಪದಿಂದ ಆ ಕೀಚಕನನ್ನು ಆಗಲೇ ಕೊಲ್ಲಲಿಕ್ಕೆ ಹೊರಟನು. ಬೇಡವೆಂದು ಯುಧಿಷ್ಠಿರನು ಸಂಜ್ಞೆಮಾಡಿ ತಡೆದನು. ಭೀಮನು ಅಣ್ಣನ ಮಾತು ಮೀರಲಾರದೆ ಸುಮ್ಮನಾದನು. ಸೈರಂಧ್ರಿಯು ಅತಿ ದೈನ್ಯದಿಂದ ಅಲ್ಲಿದ್ದವರ ಮನಸ್ಸೆಲ್ಲಾ ಒಡೆದು ಹೋಗುವ ಹಾಗೆ ಗೋಳಾಡುತ್ತಿದ್ದಳು. ಯುಧಿಷ್ಠಿರನು ಆಕೆಯನ್ನು ಸಂತೈಸಲಿಕ್ಕಾಗಿ ಎಲೌ ಸೈರಂಧ್ರಿ! ನಿನಗೆ ಪೋಷಕರಾದ ಗಂಧರ್ವರೆಲ್ಲಾ ಇದನ್ನು ನೋಡುತ್ತಲೇ ಇರುವರು; ಆದರೆ ಈಗ ಅವರು ಬಹಿರಂಗವಾಗಿ ಬರಲಿಕ್ಕಿಲ್ಲ; ಅನುಕೂಲ ಕಾಲವು ಬಂದಾಗ ಅವರು ನಿನ್ನನ್ನು ಕಾಪಾಡುವರು. ನೀನೀಗ ಅಂತಃಪುರಕ್ಕೆ ಹೋಗು ಎಂದು ಹೇಳಲು ದ್ರೌಪದಿಯು ಅಲ್ಲಿ ನಿಲ್ಲದೆ ಹೊರಟು ಹೋದಳು.

ಬಳಿಕ ಆಕೆಯು ಆ ರಾತ್ರಿಯೇ ಭೀಮನಿದ್ದ ಅಡಿಗೇಮನೆಗೆ ಹೋಗಿ ಆತನನ್ನು ಕಂಡು ತನ್ನ ಕಷ್ಟಗಳನ್ನೆಲ್ಲಾ ಅವನ ಸಂಗಡ ಹೇಳಿದಳು. ಬಹಳವಾಗಿ ಅತ್ತಳು. ಭೀಮನು ಅವಳ ಅವಸ್ಥೆಗೆ ಮರುಕಗೊಂಡು, ಆ ಅರ್ಧ ರಾತ್ರಿಯಲ್ಲಿಯೇ ಕೀಚಕನನ್ನು ಕೊಂದುಬಿಟ್ಟನು. ಅವನು ಮಡಿದ ಕೂಡಲೇ ಸೈರಂಧ್ರಿಯು ಎಲ್ಲರಿಗೂ ಕೇಳಬರುವಂತೆ ಕೀಚಕನನ್ನು ಗಂಧರ್ವರು ಕೊಂದು ಹಾಕಿದರೆಂದು ಗಟ್ಟಿಯಾಗಿ ಕೂಗಿಕೊಂಡಳು. ಭೀಮನ ಮೇಲೆ ಒಬ್ಬರಿಗೂ ಅನುಮಾನ ಹುಟ್ಟಲಿಲ್ಲ. ಆದರೂ ಕೀಚಕನ ಸಾವಿಗೆ ಈ ಸೈರಂಧ್ರಿಯೇ ಮುಖ್ಯ ಕಾರಣವೆಂದು ಊಹಿಸಿ, ಅವಳು ಆಕೆಯನ್ನು ಕರೆದು, ಅಮ್ಮಾ ನಿನ್ನನ್ನು ನೋಡಿದರೆ ಭಯವಾಗುತ್ತಿದೆ. ನೀನು ನಮ್ಮ ರಾಜ್ಯವನ್ನು ಬಿಟ್ಟು ಮತ್ತೆಲ್ಲಿಗಾದರೂ ಹೊರಟು ಹೋಗು ಎಂದು ಹೇಳಿದಳು. ಅದಕ್ಕಾಕೆಯು ತಾಯಿಾ! ತನ್ನ ಪತಿಗಳಾದ ಗಂಧರ್ವರು ಕಾರಣವಿಲ್ಲದೆ, ಒಬ್ಬರ ತಂಟೆಗೂ ಹೋಗತಕ್ಕವರಲ್ಲ. ನಿಮ್ಮ ಅಪ್ಪಣೆಯಂತೆ ಹೊರಟು ಹೋಗಲು ಸಿದ್ಧಳಾಗಿಯೇ ಇದ್ದೇನೆ, ನನಗಿನ್ನು ಹದಿಮೂರು ದಿನಗಳ ಮಾತ್ರ ಅವಧಿ ಕೊಡು. ಆ ಮೇಲೆ ನಿನ್ನ ಅಪ್ಪಣೆಯಂತೆ ನಡೆಯುವೆನು ಎಂದು ಹೇಳಲು ರಾಣಿಯು ಅದಕ್ಕೆ ಒಪ್ಪಿಕೊಂಡು ಸುಮ್ಮನಾದಳು.

ಅತ್ತ ಕೌರವರು ಪಾಂಡವರನ್ನು ಹೇಗಾದರೂ ಕಂಡುಹಿಡಿದು ಮತ್ತೆ ಹನ್ನೆರಡು ವರ್ಷ ವನವಾಸಕ್ಕೆ ಕಳುಹಿಸಬೇಕೆಂದು ಆಲೋಚಿಸಿದರು. ಅವರನ್ನು ಕಂಡುಹಿಡಿಯುವುದಕ್ಕಾಗಿ ದಿಕ್ಕು ದಿಕ್ಕುಗಳಿಗೂ ದೂತರನ್ನು ಕಳುಹಿದ್ದರು. ಅವರು ಎಲ್ಲೆಲ್ಲಿ ಹುಡುಕಿದರೂ ಪಾಂಡವರ ಜಾಡೆಯೇ ಸಿಕ್ಕಲಿಲ್ಲ. ಆಗ ಭೀಷ್ಮನು, ದ್ರೋಣನು, ವಿದುರನು ಈ ಮೂವರು ಹೊರತು ಉಳಿದ ಕೌರವರೆಲ್ಲರೂ ಪಾಂಡವರು ಸತ್ತುಹೋಗಿರಬಹುದೆಂದು ತಿಳಿದುಕೊಂಡಿದ್ದರು. ವಿರಾಟನಗರದಲ್ಲಿ ಕೀಚಕನು ಗಂಧರ್ವರಿಂದ ಕೊಲ್ಲಲ್ಪಟ್ಟನೆಂಬ ಸುದ್ದಿಯು ಬೇಹಿನವರಿಂದ ತಿಳಿದುಬಂದಿತು. ಅದನ್ನು ಕೇಳಿ ಕೌರವರು ತಮಗೆ ಸ್ನೇಹಿತನೂ, ವಿರಾಟರಾಯನಿಗೆ ಶತ್ರುವೂ ಆದ ಸುಶರ್ಮನನ್ನು ಕರೆಯಿಸಿ, ಅಯ್ಯಾ ನೀನು ಮತ್ಸ್ಯರಾಜ್ಯದ ಮೇಲೆ ದಂಡೆತ್ತಿ ಹೋಗು, ಅವನ ದ್ರವ್ಯವನ್ನೂ ಪಸುಗಳನ್ನೂ ಹಿಡಿದುಕೊಂಡು ಬಾರೆಂದು ಹೇಳಿದರು.

ಸುಶರ್ಮನು ಕೌರವರಿಂದ ತಕ್ಕ ಸಹಾಯುವನ್ನು ಪಡೆದು ತನ್ನ ಸೈನ್ಯವನ್ನೂ ಕೂಡಿಸಿಕೊಂಡು ವಿರಾಟನ ಪಟ್ಟಣದ ಮೇಲೆ ದಂಡೆತ್ತಿ ಹೋದನು. ಈ ವರ್ತಮಾನವು ಅವನಿಗೆ ತಿಳಿಯಿತು. ಅವನು ಯುದ್ಧಕ್ಕೆ ಸಿದ್ಧನಾದನು. ಅವನ ಸಂಗಡ ಕಂಕಭಟ್ಟನೂ, ವಲಲನೂ, ತಂತ್ರಿಪಾಲನೂ, ದಾಮ ಗ್ರಂಥಿಯೂ ಹೋದರು. ಈ ಎರಡು ಪಕ್ಷದವರಿಗೂ, ಬಹು ಘೋರವಾಗಿ ಯುದ್ಧವು ಜರುಗಿತು. ರಾಜನು ಶತ್ರುಗಳ ಕೈಗೆ ಸೆರೆಸಿಕ್ಕಿದನು. ಶತ್ರುಗಳ ಕೈವಶನಾದ ದೊರೆಯನ್ನು ಬಿಡಿಸದೆ ಇದ್ದರೆ ತನಗೆ ದೋಷಬರುವುದೆಂದು ತಿಳಿದು ಧರ್ಮರಾಯನು ನೀನು ಯುದ್ಧಕ್ಕೆ ಹೊರಡೆಂದು ಭೀಮಸೇನನಿಗೆ ಆಜ್ಞೆಮಾಡಿದನು. ಕೂಡಲೇ ಭೀಮಸೇನನು ಭಯಂಕರ ಸ್ವರೂಪದಿಂದ ಶತ್ರುಗಳ ಮೇಲೆ ಬಿದ್ದು ಅವರನ್ನು ಓಡಿಸಿ ವಿರಾಟರಾಯನನ್ನು ಬಿಡಿಸಿದನು.

ಮತ್ತೊಂದು ಕಡೆಯಲ್ಲಿ ದುರ್ಯೋಧನನು ಭೀಷ್ಮ, ದ್ರೋಣ ಮೊದಲಾದ ವೀರರ ಸಹಾಯದಿಂದ ವಿರಾಟನ ರಾಜ್ಯಕ್ಕೆ ನುಗ್ಗಿ, ಅವನ ಹಸುಗಳನ್ನೆಲ್ಲಾ ಹಿಡಿದುಕೊಂಡು ಓಡಿಹೋಗುತ್ತಾ ಇದ್ದನು. ಅವನನ್ನು ತಡೆಯುವವರೊಬ್ಬರಾದರೂ ಇಲ್ಲ. ವಿರಾಟರಾಯನು ಒಂದು ಕಡೆ ಯುದ್ಧ ಮಾಡುತ್ತಾ ಇದ್ದನು. ಇತ್ತ ಹಸುಗಳನ್ನು ಕೌರವರು ಹಿಡಿದುಕೊಂಡು ಹೋಗುತ್ತಲಿರುವರು ಎಂಬ ಸಂಗತಿಯು ಅಂತಃಪುರಕ್ಕೆ ತಿಳಿಯಿತು. ವಿರಾಟರಾಜನ ಮಗನಾದ ಉತ್ತರನು ಆಗ ಅಂತಃಪುರದಲ್ಲಿದ್ದನು. ಅವನು ಹೇಡಿ, ಬಹು ಅಂಜುಪುರುಕಿ, ತನ್ನ ಭಯವನ್ನು ಹೊರಪಡಿಸದೆ ಅವನು ರಾಣಿವಾಸದ ಹೆಂಗಸರನ್ನು ನೋಡಿ, ಅಯ್ಯೋ ನಾನು ಈಗ ಏನು ಮಾಡಬಲ್ಲೆನು! ನನಗೆ ಸಾರಥಿ ಇಲ್ಲ, ತಕ್ಕ ಸಾರಥಿಯೊಬ್ಬನು ಸಿಕ್ಕಿದರೆ ನಾನು ಈಗಲೇ ಹೋಗಿ ದುರಾತ್ಮರಾದ ಆ ಕೌರವರನ್ನೆಲ್ಲಾ ಕೊಂದುಹಾಕಿ ನನ್ನ ಪಶುಗಳನ್ನು ಬಿಡಿಸಿಕೊಂಡು ಬರುತ್ತಿದ್ದೆನಲ್ಲಾ! ಎಂದು ಒಣಜಂಭವನ್ನು ಕೊಚ್ಚಿಕೊಂಡನು. ಬೃಹನ್ನಳೆ ಎಂಬ ಹೆಸರಿನಿಂದ ನಾಟ್ಯ ವಿದ್ಯೆಯನ್ನು ಕಲಿಸುತ್ತಲಿದ್ದ ಅರ್ಜುನನು, ಆತನಿಗೆ ಸಾರಥಿಯಾಗಿ ಹೋಗಿ ಬರುವೆನೆಂದು ಹೇಳಿದನು. ಉತ್ತರನು ಅದಕ್ಕೆ ಸಮ್ಮತಿಸಲಿಲ್ಲ. ಆಗ ಬೃಹನ್ನಳೆಯು ತಾನು ಅರ್ಜುನನಿಗೆ ಸಾರಥಿಯಾಗಿದ್ದು ಹಲವು ಯುದ್ಧ

ಗಳಲ್ಲಿ ಸಹಾಯಮಾಡಿದ್ದೆನೆಂದು ಹೇಳಿದನು. ಹಾಗಾದರೆ ಈಗಲೂ ತನಗೆ ಸಹಾಯಮಾಡು, ನಿನಗೆ ಒಳ್ಳೆಯ ಬಹುಮಾನ ಕೊಡುವೆನು ಎಂದು ಹೇಳಿ ಅವನನ್ನು ಸಂಗಡ ಕರೆದುಕೊಂಡು ಯುದ್ಧಭೂಮಿಗೆ ಪ್ರಯಾಣಮಾಡಿ ಹೊರಟನು.

ಆಗ ಬೃಹನ್ನಳೆಯು ರಥವನ್ನು ನಡೆಸಿಕೊಂಡು ಹೋಗಿ, ತಾವು ಮೊದಲು ಅಸ್ತ್ರಗಳನ್ನಿಟ್ಟಿದ್ದ ಬನ್ನೀಮರದ ಕೆಳಗೆ ರಥವನ್ನು ನಿಲ್ಲಿಸಿ ತನ್ನ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡನು. ಉತ್ತರನು ಅಲ್ಲಿಯೇ ನಿಂತುಕೊಂಡು ಸುತ್ತಲೂ ನೋಡಿ ಅಗಾಧವಾಗಿದ್ದ ಕೌರವ ಸೇನಾಸಮುದ್ರವನ್ನು ಕಂಡು ಹೆದರಿ ಸಾರಥಿಯನ್ನು ಕುರಿತು ಬೃಹನ್ನಳೆ! ಇತ್ತ ನೋಡು ಎಷ್ಟು ಭಯಂಕರ ವಾಗಿದೆ. ಇವರೊಂದಿಗೆ ನಾನು ಯುದ್ಧಮಾಡಬಲ್ಲೆನೇ! ಇವರನ್ನು ಜಯಿಸುವುದು ನನ್ನಿಂದಾಗದು ಸಾಕಪ್ಪಾ! ಸಾಕು. ಈ ಯುದ್ಧದ ಗೊಡವೆ ನನಗೆ ಬೇಡ. ರಥವನ್ನು ಹಿಂದಕ್ಕೆ ತಿರುಗಿಸು. ನಾನು ಅರಮನೆಗೆ ಹೋಗಿ ಸೇರಿಕೊಳ್ಳುವೆನು ಎಂದು ಅತಿ ದೈನ್ಯದಿಂದ ಸಾರಥಿಯನ್ನು ಬೇಡಿಕೊಂಡನು. ಅದಕ್ಕವನು ಅಯ್ಯಾ ಧೊರೆಮಗನೆ ಕ್ಷತ್ರಿಯನು ರಣಭೂಮಿಗೆ ಬಂದು ಹಿಂದಿರುಗಿ ಹೋಗುವುದು ಹೇಡಿತನವಲ್ಲವೇ? ಇದು ರಾಜ್ಯಧರ್ಮಕ್ಕೆ ವಿರುದ್ಧವಾದುದು. ನೀನು ಉತ್ತಮ ಕ್ಷತ್ರಿಯನು, ರಣದಲ್ಲಿ ಗೆದ್ದರೆ ರಾಜ್ಯ ಸಿಕ್ಕುವುದು, ಕಾದಿ ಮಡಿದರೆ ವೀರಸ್ವರ್ಗವು ಲಭಿಸುವುದು. ಇದರಿಂದ ಯಾವ ನಷ್ಟವೂ ಇಲ್ಲ. ಎಂದಾದರೂ ಒಂದು ದಿನ ಸಾಯಲೇ ಬೇಕು, ಹೆದರಬೇಡವೆಂದು ಎಷ್ಟೋ ಬುದ್ಧಿ ಮಾತುಗಳನ್ನು ಹೇಳಿದನು. ಉತ್ತರನು ಅದಕ್ಕೆ ಒಪ್ಪದೆ ಅಳುತ್ತಾ ನಿಂತುಕೊಂಡನು. ಅವನ ಮೈಯೆಲ್ಲಾ ನಡುಗುತ್ತಲಿತ್ತು; ಮೈ ಬೆವರು ಹೋಯಿತು. ರಥದಮೇಲೆ ಕುಳ್ಳಿರಲಾರದೆ ಬಿದ್ದು ಬಿಟ್ಟನು. ಬಾಯಿಯಿಂದ ಮಾತುಗಳೇ ಹೊರಡಲಿಲ್ಲ. ಹೇಗೋ ಬಹು ಕಷ್ಟದಿಂದ ಅಸ್ಪಷ್ಟವಾದ ಮಾತುಗಳಿಂದ ಅರ್ಜುನನನ್ನು ದೂಷಿಸಿದನು. ಅಯ್ಯಾ ನೀನು ಬೇಡಿದುದನ್ನೆಲ್ಲಾ ಕೊಡುವೆನು, ನಾನು ಯುದ್ಧಕ್ಕೆ ಬರಲಾರೆನು, ಬಂದರೆ ಬದುಕಿ ಬರುವುದು ಕಷ್ಟ, ನಮ್ಮಮ್ಮನನ್ನು ನೋಡಬೇಕೆಂಬ ಆಶೆ ಹುಟ್ಟಿದೆ, ರಥವನ್ನು ಹಿಂದಿರಿಗಿಸು, ಅಂತಃಪುರಕ್ಕೆ ಹೋಗಿ ಸೇರಿಕೊಳ್ಳುವೆನು

ಎಂದು ಬಹಳವಾಗಿ ಪ್ರಾರ್ಥಿಸಿದನು. ಅವನು ಎಷ್ಟು ಅತ್ತರೂ ಎಷ್ಟು ದೂಷಿಸಿದರೂ ಅರ್ಜುನನು ರಥವನ್ನು ಹಿಂದಿರುಗಿಸದೆ ನೀತಿಗಳನ್ನು ಬೋಧಿಸಿ ಧೈರ್ಯ ಹುಟ್ಟುವ ಮಾತುಗಳಿಂದ ಅವನನ್ನು ಸಮಾಧಾನಪಡಿಸುತ್ತ ಲಿದ್ದನು. ಉತ್ತರನಿಗೆ ಇದು ಸರಿಬೀಳಲಿಲ್ಲ. ಇವನೊಬ್ಬನೇ ಯುದ್ಧಕ್ಕೆ ಹೋಗಿ ಶತ್ರುಗಳ ಕೈಗೆ ಸಿಕ್ಕಿ ಸಾಯಲಿ ಎಂದುಕೊಂಡು ರಥದ ಮೇಲಿನಿಂದ ಧುಮುಕಿ ಪಟ್ಟಣದ ಕಡೆಗೆ ಓಡಿಹೋಗಲಿಕ್ಕೆ ಯತ್ನಿಸಿದನು. ಆಗ ಅರ್ಜುನನು ರಥವನ್ನು ವೇಗವಾಗಿ ಓಡಿಸಿ ಆ ಉತ್ತರನನ್ನು ಹಿಡಿದುಕೊಂಡು ನೀನು ಯುದ್ಧ ಮಾಡದಿದ್ದರೆ ಹೋಗಲಿ ಈ ರಥವನ್ನಾದರೂ ನಡಿಸಿಕೊಂಡು ಬಾ ನಾನೇ ಯುದ್ಧ ಮಾಡುವೆನು. ಓಡಿಹೋಗಬೇಡ ಎಂದು ಅವನಿಗೆ ಧೈರ್ಯ ಹೇಳಿದನು. ಆಗ ಉತ್ತರಕುಮಾರನಿಗೆ ಸ್ವಲ್ಪ ಛಳಿ ಬಿಟ್ಟಿತು. ಧೈರ್ಯವನ್ನು ತಂದುಕೊಂಡು ತೇರಿನ ಮೇಲೆ ಹತ್ತಿ ಕುಳಿತನು. ಕೌರವರು ಇದನ್ನೆಲ್ಲಾ ದೂರದಲ್ಲಿಯೇ ನಿಂತು ನೋಡಿದರು. ನಮ್ಮೊಂದಿಗೆ ಯುದ್ಧಕ್ಕೆ ಬರತಕ್ಕ ಸಾಮರ್ಥ್ಯವುಳ್ಳ ಹೆಂಗಸು ಯಾರೋ ಎಂದು ಅವರಿಗೆ ಬಹಳ ಆಶ್ಚರ್ಯ ವಾಯಿತು. ಅರ್ಜುನನೇ ಸ್ತ್ರೀವೇಶವನ್ನು ಹಾಕಿಕೊಂಡು ಬಂದಿರಬಹುದೇ ಎಂದು ಅವರಿಗೆ ಸಂದೇಹ ಹುಟ್ಟಿತು. ಅವನು ಅರ್ಜುನನೇ ಆಗಿದ್ದರೆ ಈಗ ಅವನೊಬ್ಬನೇ ನಮ್ಮ ಕೈಗೆ ಸಿಕ್ಕಿರುವನು. ಇವನನ್ನು ಸುಲಭವಾಗಿ ಕೊಂದುಬಿಡಬಹುದು ಎಂದು ಕೌರವರು ಧೈರ್ಯಗೊಂಡರು.

ಆಗ ಅಲ್ಲಿದ್ದ ಭೀಷ್ಮ, ದ್ರೋಣ ಮೊದಲಾದ ವೀರರು ದುರ್ಯೋಧನನನ್ನು ನೋಡಿ, ಎಲೈ ರಾಜನೇ ಪಾಂಡವರು ಮಾಡಬೇಕಾಗಿದ್ದ ಅಜ್ಞಾತ ವಾಸದ ಅವಧಿಯು ಕಳೆದುಹೋಯಿತು. ಈಗ ಯುದ್ಧಕ್ಕೆ ಬಂದಿರುವ ಸ್ತ್ರೀಯು ಅರ್ಜುನನೇ ಸರಿ. ಇವನನ್ನು ಯಾರೂ ಜಯಿಸಲಾರಿರಿ ಎಂದು ಹೇಳಿದರು. ದುರ್ಯೋಧನನು ಇದನ್ನು ಒಪ್ಪಲಿಲ್ಲ. ಆಗಲಿ ಒಂದು ಕೈ ನೋಡಿಯೇ ಬಿಡುವೆನು. ನಿಮ್ಮ ಕಂತೆ ಪುರಾಣ ನಮಗೆ ಬೇಡ, ಈಗ ಯುದ್ಧ ಕೊಡಲೇ ಬೇಕು ಎಂದು ಹಟ ಹಿಡಿದನು. ಅರ್ಜುನನು ಉತ್ತರ ನನ್ನು ಬನ್ನೀಮರದ ಮೇಲೆ ಹತ್ತಿಸಿ ತನ್ನ ಅಸ್ತ್ರಗಳನ್ನು ತೆಗೆಸಿಕೊಂಡು

ಬಿಲ್ಲನ್ನು ಬಗ್ಗಿಸಿ ಅದರಲ್ಲಿ ಬಾಣವನ್ನು ಹೂಡಿದನು. ಉತ್ತರನು ಆ ಬಾಣದ ಅಂದಚಂದಗಳನ್ನು ನೋಡಿ ಆಶ್ಚರ್ಯಪಟ್ಟನು. ಅವನಿಗೆ ಭಯ ಹೆಚ್ಚಾಯಿತು. ಅಯ್ಯಾ ವೀರನೇ ಈ ಬಾಣಗಳು ಯಾರವು? ದಯಮಾಡಿ ತಿಳಿಸು ಎಂದು ಬೇಡಿದನು. ಅದಕ್ಕೆ ಅರ್ಜುನನು ಅಯ್ಯಾ ಉತ್ತರ ಕುಮಾರನೇ ಪಾಂಡವರ ಅಜ್ಞಾತವಾಸದ ಅವಧಿಯು ಇಂದಿಗೆ ಮುಗಿದು ಹೋಯಿತು. ನಿಜ ಹೇಳುವುದಕ್ಕೆ ಈಗ ಭಯಪಡಬೇಕಾದುದಿಲ್ಲ. ನಮ್ಮ ಸ್ಥಿತಿಯನ್ನು ಹೇಳುವೆನು ಕೇಳು. ನಾನೇ ಪಾಂಡವರ ಮಧ್ಯಮನಾದ ಅರ್ಜುನನು, ಅಂತಃಪುರದಲ್ಲಿರುವ ಸೈರಂಧ್ರಿಯು ನಮ್ಮ ಪತ್ನಿಯಾದ ದ್ರೌಪದಿ, ಸನ್ಯಾಸಿವೇಷದಿಂದಿರುವ ಕಂಕಭಟ್ಟನೇ ಯುಧಿಷ್ಠಿರನು, ಬಾಣಸಿಗನಾದ ವಲಲನೇ ಭೀಮಸೇನನು, ದಾಮಗ್ರಂಥಿಯೇ ನಕುಲನು ತಂತ್ರಿಪಾಲನೇ ಸಹದೇವನು, ನಾವೆಲ್ಲರೂ ಅಜ್ಞಾತವಾಸಕ್ಕೋಸ್ಕರ ಒಂದು ವರ್ಷದಿಂದ ನಿಮ್ಮ ಪಟ್ಟಣದಲ್ಲಿದ್ದುಕೊಂಡು ಪ್ರತಿಜ್ಞೆಯನ್ನು ಪಾಲಿಸಿದೆವು ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ಉತ್ತರನಿಗೆ ಬಹು ಆಶ್ಚರ್ಯವಾಯಿತು. ಅವನು ವಿನಯದಿಂದ ಅರ್ಜುನನನ್ನು ನೋಡಿ, ಅಯ್ಯಾ ವೀರನೇ ನಾನು ಅಜ್ಞಾನದಿಂದ ನಿನ್ನನ್ನು ಹಲವು ಮಾತುಗಳಿಂದ ದೂಷಿಸಿ ದೊಡ್ಡ ತಪ್ಪು ಮಾಡಿದೆನು; ಇದನ್ನು ಮನಸ್ಸಿನಲ್ಲಿಡದೆ ನನ್ನನ್ನು ಕ್ಷಮಿಸು ಎಂದು ಆತನ ಕಾಲುಗಳ ಮೇಲೆ ಬಿದ್ದು ಬೇಡಿಕೊಂಡನು. ಅರ್ಜುನನು ಅವನನ್ನು ಸಂತೈಸಿ ಧೈರ್ಯದ ಮಾತುಗಳನ್ನು ಹೇಳಿದನು. ತನ್ನ ರಥವನ್ನು ಕೌರವರ ಸೈನ್ಯದ ಮಧ್ಯಭಾಗಕ್ಕೆ ನಡಸೆಂದು ಹೇಳಿ ತನ್ನ ಶಂಖವನ್ನು ಊದಿದನು. ಭಯಂಕರವಾದ ಆ ಶಂಖಧ್ವನಿಯನ್ನು ಕೇಳಿದಕೂಡಲೇ ಕೌರವರ ಎದೆಗಳೆಲ್ಲಾ ಒಡೆದುಹೋದವು; ಸೈನಿಕರೆಲ್ಲಾ ಹೆದರಿಕೆಯಿಂದ ಓಡಿಹೋದರು. ಉಳಿದವರೊಂದಿಗೆ ಯುದ್ಧವು ಜರುಗಿತು. ಕರ್ಣನು, ಕೃಪಾಚಾರ್ಯನು, ದ್ರೋಣಾಚಾರ್ಯನು, ಅಶ್ವತ್ಥಾಮನು ಮೊದಲಾದವರು ಅರ್ಜುನನೊಂದಿಗೆ ಯುದ್ಧಮಾಡಿ ಸೋತುಹೋದರು. ಆದ ವೀರನಿಗೆ ಎದುರಿಸಿ ನಿಂತು ಕಾದಲಿಕ್ಕೆ ಒಬ್ಬರಿಗೂ ಶಕ್ತಿಯಿಲ್ಲದೆ ಓಡಿಹೋಗಬೇಕೆಂದು ಯತ್ನಿಸಿದರು. ಅಶ್ವತ್ಥಾ

ಮನು ಯುದ್ಧ ಮಾಡುತ್ತಿರುವಾಗ ಆತನು ಅರ್ಜುನನ ಬಿಲ್ಲಿನ ಹಗ್ಗವನ್ನು ಕತ್ತರಿಸಿಬಿಟ್ಟನು. ಆ ವೀರನಿಗೆ ರೋಷ ಹೆಚ್ಚಾಗಿ ಹಲವು ಬಾಣಗಳಿಂದ ಆ ಗುರುಪುತ್ರನನ್ನು ಬಲವಾಗಿ ನೋಯಿಸಿದನು. ಅಶ್ವತ್ಥಾಮನು ಹೆದರಿ ಪ್ರಾಣಭಯದಿಂದ ಕಂಬೀಕಿತ್ತನು.

ಬಳಿಕ ಕರ್ಣನು ಯುದ್ಧಕ್ಕೆ ನಿಂತನು. ಕರ್ಣಾರ್ಜುನರಿಗೆ ಭಯಂಕರವಾದ ಯುದ್ಧವಾಯಿತು. ಅರ್ಜುನನ ಪೆಟ್ಟಿನಿಂದ ಕರ್ಣನು ನೊಂದನು. ಮೈಮರೆತು ಬಿದ್ದನು, ಬಳಿಕ ಭೀಷ್ಮನು ಯುದ್ಧಕ್ಕೆ ನಿಂತನು. ಅವನ ಧ್ವಜವು ಮುರಿದುಬಿತ್ತು. ದುಶ್ಶ್ಯಾಸನ, ದುಸ್ಸಹ, ವಿಕರ್ಣ ಮೊದಲಾದ ಕೌರವವೀರರೆಲ್ಲಾ ಓಡಿ ಸೋತುಹೋಗಿ ಪಲಾಯನ ಮಾಡಿದರು. ಈ ರೀತಿಯಲ್ಲಿ ಕೌರವರನ್ನೆಲ್ಲಾ ಸೋಲಿಸಿ ಅರ್ಜುನನು ವಿರಾಟರಾಯನ ಪಶುಗಳನ್ನು ಬಿಡಿಸಿಕೊಂಡು ಉತ್ತರನೊಂದಿಗೆ ಜಯಧ್ವನಿಮಾಡಿಸಿಕೊಂಡು ಅರಮನೆಯ ಕಡೆಗೆ ಮರಳಿ ಬಂದನು. ಅವನು ಹಿಂದಿರುಗಿ ಬರುವಾಗ ದಾರಿಯಲ್ಲಿದ್ದ ಬನ್ನೀಮರದ ಮೇಲೆ ತನ್ನ ಅಸ್ತ್ರಗಳನ್ನಿರಿಸಿ ಮೊದಲಿದ್ದಂತೆಯೇ ಕಟ್ಟಿಸಿಟ್ಟು ಉತ್ತರನನ್ನು ನೋಡಿ ತಮ್ಮಾ ನಾನು ಅರ್ಜುನನೆಂದು ಸದ್ಯದಲ್ಲಿ ಒಬ್ಬರ ಸಂಗಡಲೂ ಹೇಳಬೇಡ ಮುಂದೆ ಸಮಯ ಬಂದಾಗ ಹೇಳಬಹುದು ಎಂದು ಹೇಳಿ ಮರಳಿ ಬೃಹನ್ನಳೆಯ ರೂಪವನ್ನು ಧರಿಸಿ ಅಂತಃಪುರಕ್ಕೆ ಹೋಗಿ ಸೇರಿದನು.

ಆಗ ವಿರಾಟರಾಜನು ಯುಧಿಷ್ಠಿರನೊಂದಿಗೆ ಪಗಡೆಯಾಡುತ್ತಲಿದ್ದನು. ಉತ್ತರಕುಮಾರನು ಕುರುವೀರರೊಂದಿಗೆ ಕಾದಿ ಯುದ್ಧದಲ್ಲಿ ಗೆದ್ದು ಹಸುಗಳನ್ನು ಬಿಡಿಸಿಕೊಂಡು ಬಂದನೆಂಬ ಸಮಾಚಾರವು ದೂತರಿಂದ ರಾಜನಿಗೆ ತಿಳಿಯಿತು. ಆತನು ಅಧಿಕವಾದ ಸಂತೋಷದಿಂದ ತನ್ನ ಮಗನ ಧೈರ್ಯ ಶೌರ್ಯಾದಿಗಳನ್ನು ಬಹಳವಾಗಿ ಹೊಗಳಿಕೊಂಡನು. ಅದಕ್ಕಾ ಕಂಕಭಟ್ಟನು: ಅಯ್ಯಾ ರಾಜನೇ ನೀನು ಹೀಗೆ ಹೇಳುವುದು ಸರಿಯಲ್ಲ; ಹೇಡಿಯಾದ ನಿನ್ನ ಮಗನಿಗೆ ಅಂಥಾ ವೀರರನ್ನು ಜಯಿಸುವ ಸಾಮರ್ಥ್ಯವೆಲ್ಲಿಂದ ಬಂದಿತು? ನಿನ್ನ ಮಗನಿಗೆ ಸಾರಥಿಯಾಗಿದ್ದ ಬೃಹನ್ನಳೆಯ ಸಾಹಸ ಪ್ರಯತ್ನಗಳಿಂದ

ನಿನ್ನ ಮಗನಿಗೆ ಜಯದೊರಕಿತೇ ಹೊರತು ಸ್ವಸಾಮರ್ಥ್ಯದಿಂದ ಅವನು ಗೆಲ್ಲಲಿಲ್ಲವೆಂದು ತಿಳಿ ಎಂದು ಹೇಳಿದನು. ಈ ಮಾತನ್ನು ಕೇಳಿ ರಾಜನಿಗೆ ಮತ್ತಷ್ಟು ಕೋಪ ಬಂದಿತು. ಎಲಾ ಹುಚ್ಚು ಬ್ರಾಹ್ಮಣ! ವೀರಪುತ್ರನಾದ ನನ್ನ ಮಗನನ್ನು ನಪುಂಸಕನಿಗೆ ಹೋಲಿಸಿ ಹೇಳುವೆಯಾ ಛೀ, ಛೀ, ಬಾಯಿ ಮುಚ್ಚು ಎಂದು ತನ್ನ ಕೈಯಲ್ಲಿದ್ದ ದಾಳವನ್ನು ಆ ಕಂಕಭಟ್ಟನ ಮುಖದ ಮೇಲೆ ಚುಚ್ಚಿ ತಿವಿದನು. ಮೂಗಿಗೆ ಆ ಪೆಟ್ಟು ತಗಲಿ ರಕ್ತಪ್ರವಾಹವು ಹರಿಯಲಾರಂಭಿಸಿತು. ಯುಧಿಷ್ಠಿರನು ಕೋಪಿಸಿಕೊಳ್ಳದೆ ಶಾಂತಚಿತ್ತ ನಾಗಿಯೇ ಇದ್ದನು. ಅಷ್ಟರಲ್ಲಿ ಉತ್ತರಕುಮಾರನು ಅಲ್ಲಿಗೆ ಬಂದನು. ಅವನು ಯುಧಿಷ್ಠಿರನ ಮೂಗಿನಲ್ಲಿ ಸುರಿಯುತ್ತಲಿದ್ದ ರಕ್ತಪ್ರವಾಹವನ್ನು ನೋಡಿ ಗಾಬರಿಯಾಗಿ ಇದೇನೆಂದು ಕೇಳಲು ವಿರಾಟರಾಯನು ನಡೆದ ಸಮಾಚಾರವನ್ನು ಮಗನಿಗೆ ಹೇಳಿದನು. ಅದಕ್ಕೆ ಉತ್ತರನು ಅಪ್ಪಾಜಿ, ಎಂಥಾ ಪ್ರಮಾದಮಾಡಿದೆ! ಆ ವೀರಪುರುಷನು ನನ್ನ ಸಂಗಡ ಬಾರದೆ ಇದ್ದರೆ ಘೋರವಾದ ಆ ಕೌರವ ಸೇನಾಸಮುದ್ರವನ್ನು ಜಯಿಸುವುದಕ್ಕೆ ನನ್ನಿಂದ ಸಾಧ್ಯವಾಗುತ್ತಲಿತ್ತೇ. ಈ ಜಯವು ನಿಜವಾಗಿಯೂ ಆತನಿಂದ ಆದುದೇ ಹೊರತು ನನ್ನ ಸಾಮರ್ಥ್ಯವು ಇದರಲ್ಲಿ ಲೇಶಮಾತ್ರವೂ ಇಲ್ಲ. ಆ ವೀರನು ಯಾರೆಂಬುದು ನಿಮಗೆ ಮುಂದೆ ತಿಳಿಯಬರುವುದು. ಈಗ ನೀವು ಈ ಮಹಾತ್ಮನನ್ನು ಬೇಡಿಕೊಂಡು ಇವರ ಅನುಗ್ರಹವನ್ನು ಪಡೆಯಿರಿ ಎಂದು ಹೇಳಿದನು. ವಿರಾಟರಾಯನು ಅದಕ್ಕೆ ಹೆದರಿ ನನ್ನ ತಪ್ಪನ್ನು ಕ್ಷಮಿಸಬೇಕೆಂದು ಆ ಕಂಕಭಟ್ಟನನ್ನು ಪ್ರಾರ್ಥಿಸಿ ಅವನ ಪ್ರಸನ್ನತೆಯನ್ನು ಪಡೆದನು.

ಬಳಿಕ ಯುಧಿಷ್ಠಿರನು ತಮ್ಮ ವರ್ತಮಾನಗಳನ್ನೆಲ್ಲಾ ವಿರಾಟರಾಯನಿಗೆ ತಿಳಿಸಿ ಅದುವರೆಗೆ ತಮಗೆ ಸಂಭವಿಸಿದ ಸುಖದುಃಖಗಳನ್ನೆಲ್ಲಾ ವಿವರಿಸಿದನು. ವಿರಾಟನು ಅದನ್ನೆಲ್ಲಾ ಕೇಳಿ ಬಹಳವಾಗಿ ನೊಂದು ಅವರಿಗೆ ಸಂಭವಿಸಿದ ಕಷ್ಟಗಳಿಗೆ ಬಹಳವಾಗಿ ಅನುತಾಪಗೊಂಡನು. ಬಳಿಕ ತನ್ನ ಮಗಳಾದ ಉತ್ತರೆಯನ್ನು ಅರ್ಜುನನಿಗೆ ಕೊಟ್ಟು ಮದುವೆ ಮಾಡಬೇಕೆಂಬ ತನ್ನ ಕೋರಿಕೆಯನ್ನು ತಿಳಿಸಿದನು. ಅದಕ್ಕೆ ಅರ್ಜುನನು

ಎಲೈ ರಾಜನೇ ನಾನು ಆ ಕನ್ಯೆಗೆ ನಾಟ್ಯಗಳನ್ನೂ ಸಂಗೀತ ವಿದ್ಯೆಗಳನ್ನೂ ಕಲಿಸಿ ಗುರುವಾಗಿರುವುದರಿಂದ ಅವಳಿಗೆ ತಂದೆಯಾಗಿರುವೆನು. ಮಗಳನ್ನು ಮದುವೆಯಾಗುವುದು ಧರ್ಮವಿರುದ್ಧವಲ್ಲವೇ! ನಮ್ಮ ಸಂಬಂಧ ಬೆಳೆಸ ಬೇಕೆಂದು ನಿಮಗೆ ಇಷ್ಟವಿದ್ದರೆ ಅವಳನ್ನು ನನ್ನ ಮಗನಾದ ಅಭಿಮನ್ಯುವಿಗೆ ಕೊಟ್ಟು ಮದುವೆ ಮಾಡಬಹುದು. ಆಕೆಯನ್ನು ಸೊಸೆಯಾಗಿ ಮಾಡಿ ಕೊಳ್ಳಲು ನನಗೆ ಸಮ್ಮತವಾಗಿದೆ ಎಂದು ಹೇಳಿದನು. ಅದಕ್ಕೆ ರಾಜನು ಬಹಳ ಸಂತೋಷಗೊಂಡು ತನ್ನ ಬಂಧುಮಿತ್ರರನ್ನೆಲ್ಲಾ ಕರೆಯಿಸಿ ಒಂದು ಶುಭಲಗ್ನದಲ್ಲಿ ತನ್ನ ಮಗಳಾದ ಉತ್ತರೆಯನ್ನು ಅಭಿಮನ್ಯು ಕುಮಾರನಿಗೆ ಕೊಟ್ಟು ಪರಮವೈಭವದಿಂದ ವಿವಾಹಮುಹೂರ್ತವನ್ನು ಬೆಳೆಯಿಸಿದನು.

---

## ಹನ್ನೆರಡನೆಯ ಪಾಠ.

**ಉತ್ತರೆಯ** ಮದುವೆಯು ಬಹು ಸಂಭ್ರಮದಿಂದ ನಡೆಯಿತು. ವಿವಾಹಕ್ಕೆ ಬಂದಿದ್ದ ರಾಜರೂ, ಮಂತ್ರಿಗಳೂ, ಇತರ ದೊಡ್ಡ ಮನುಷ್ಯರೂ ಒಡ್ಡೋಲಗದಲ್ಲಿ ಕುಳಿತಿದ್ದರು. ಆ ಸಭೆಯಲ್ಲಿ ಶ್ರೀಕೃಷ್ಣನು ಎದ್ದು ನಿಂತು ಸಭಿಕರನ್ನು ನೋಡಿ, ಮಹಾಜನರೇ ಈ ಪಾಂಡವರು ತಾವಾಡಿದ ಪ್ರತಿಜ್ಞೆಯಂತೆ ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಪೂರಯಿಸಿ ಕೃತಾರ್ಥರಾದರು. ಮುಂದೆ ಇವರ ಗತಿ ಏನು? ಇವರಿಗೆ ರಾಜ್ಯ ಸಿಕ್ಕುವ ಬಗೆ ಹೇಗೆ? ಕೌರವರು ನ್ಯಾಯಮಾರ್ಗದಿಂದ ಇವರಿಗೆ ಸಲ್ಲಬೇಕಾದ ಅರ್ಧ ರಾಜ್ಯವನ್ನು ಕೊಡಬಲ್ಲರೇ? ಇದಕ್ಕೆ ತಕ್ಕ ಉಪಾಯವನ್ನು ನಿರ್ಣಯಿಸಿ ಹೇಳಿರಿ. ಮೂರ್ಖನಾದ ದುರ್ಯೋಧನನ ಮನಸ್ಸು ನಿಮಗೆ ತಿಳಿದೇ ಇದೆ. ಆದರೂ ಇವರಿಗೆ ಲೋಕನಿಂದೆ ತಟ್ಟದಂತೆ ಕಾರ್ಯಸಾಧನೆಯಾಗುವ ಉಪಾಯವನ್ನು ಯೋಚಿಸಿ ಹೇಳಿರಿ. ಯಾರನ್ನಾದನೂ ಒಬ್ಬ ಮಧ್ಯಸ್ಥಗಾರನನ್ನು ಆ ಕೌರವರ ಸಭೆಗೆ ಕಳುಹಿಸಿ ಅವರ ಅಭಿಪ್ರಾಯಗಳನ್ನು ತಿಳಿದು ಮುಂದಿನ ಕೆಲಸ ಮಾಡುವುದು ಒಳ್ಳೆಯ

ದೆಂದು ನನಗೆ ತೋರುತ್ತದೆ ಎಂದು ಹೇಳಿದನು. ಅದರ ಮೇಲೆ ಅಲ್ಲಿದ್ದವರು ತಮತಮಗೆ ತಿಳಿದ ಮಾತುಗಳನ್ನು ಹೇಳಿದರು. ಸಭೆಯಲ್ಲಿದ್ದವರೆಲ್ಲರೂ ತಮ್ಮ ತಮ್ಮ ಶಕ್ತಿವಂಚನೆಯಿಲ್ಲದೆ ಸೈನ್ಯದೊಂದಿಗೆ ಬಂದು ಪಾಂಡವರಿಗೆ ಸಹಾಯ ಮಾಡುವೆವೆಂದು ಒಪ್ಪಿಕೊಂಡರು. ಅವನ ಮಾವನಾದ ದ್ರುಪದರಾಯನು ತನ್ನ ಗುರುವನ್ನು ಕೌರವರ ಬಳಿಗೆ ರಾಯಭಾರಿಯನ್ನಾಗಿ ಕಳುಹಿಸಿಕೊಟ್ಟನು. ಆತನು ಪ್ರಯಾಣಮಾಡಿ ಹೊರಟನು. ಅಲ್ಲಿಗೆ ಬಾರದೇ ಇದ್ದ ಇತರ ಸಂಸ್ಥಾನಾಧಿಪತಿಗಳ ಹತ್ತಿರಕ್ಕೆ ಪತ್ರಗಳನ್ನು ಬರೆದು ಪಾಂಡವರ ದೂತರ ಮೂಲಕ ಕಳುಹಿಸಿಕೊಟ್ಟರು. ಅವರಲ್ಲಿ ಅನೇಕರು ತಾವೂ ಬಂದು ಸಹಾಯಮಾಡುವುದಾಗಿ ಪ್ರತ್ಯುತ್ತರಗಳನ್ನು ಬರೆದು ಕಳುಹಿಸಿ ಕೊಟ್ಟರು.

ಶ್ರೀಕೃಷ್ಣನು ತಮಗೆ ಸಹಾಯಕನಾಗಿ ಬರಬೇಕೆಂದು ದುರ್ಯೋಧನನೂ ತಮಗೆ ಸಹಾಯಮಾಡಬೇಕೆಂದು ಅರ್ಜುನನೂ ಬಯಸುತ್ತಲಿದ್ದರು. ಇದಕ್ಕಾಗಿ ಆ ಮಹಾತ್ಮನನ್ನು ಕೇಳಿಕೊಳ್ಳಬೇಕೆಂದು ಅರ್ಜುನನು ಒಂದು ದಿನ ದ್ವಾರಕಾಪಟ್ಟಣಕ್ಕೆ ಹೋದನು. ಅದಕ್ಕೆ ಮೊದಲೇ ದುರ್ಯೋಧನನು ಅಲ್ಲಿಗೆ ಬಂದು ಸೇರಿದ್ದನು. ಆಗ ಶ್ರೀಕೃಷ್ಣನು ಮಲಗಿ ನಿದ್ದೆಮಾಡುತ್ತಲಿದ್ದನು. ಅವನನ್ನು ಎಬ್ಬಿಸಲಿಕ್ಕೆ ಕುರುಪತಿಗೆ ಧೈರ್ಯ ಸಾಲದು. ಅವನು ಶ್ರೀಕೃಷ್ಣನ ತಲೆಯ ಕಡೆಯಲ್ಲಿ ಹಾಕಿದ್ದ ಉನ್ನತವಾದ ನಾಗಾಲಿನ ಮೇಲೆ ಕುಳಿತುಕೊಂಡನು. ಆಗಲೇ ಅರ್ಜುನನೂ ಅಲ್ಲಿಗೆ ಹೋದನು. ಅವನೂ ಶ್ರೀಕೃಷ್ಣನನ್ನು ಎಬ್ಬಿಸಲಾರದೆ ಶ್ರೀಕೃಷ್ಣನ ಕಾಲಿನ ಹತ್ತಿರ ಹಾಕಿದ್ದ ಒಂದು ಮಂಚದ ಮೇಲೆ ಕುಳಿತುಕೊಂಡನು. ಶ್ರೀಕೃಷ್ಣನು ಎಚ್ಚತ್ತನು. ಅವನ ದೃಷ್ಟಿಯು ಕಾಲಿನ ಕಡೆಗೆ ಬಿತ್ತು. ಅವನು ಅಲ್ಲಿ ಕುಳಿತಿದ್ದ ಅರ್ಜುನನನ್ನು ನೋಡಿ ಅವನ ಕ್ಷೇಮಸಮಾಚಾರವನ್ನು ವಿಚಾರಿಸಿ ನೀನು ಬಂದಿರುವ ಕಾರ್ಯಾರ್ಥವೇನೆಂದು ಕೇಳಿದನು. ಅದಕ್ಕೆ ಅರ್ಜುನನು ತನ್ನ ಉದ್ದೇಶವನ್ನು ತಿಳಿಸಿ ನಮಗೆ ಸಹಾಯಕನಾಗಿ ಬರಬೇಕೆಂದು ಪ್ರಾರ್ಥಿಸಿದನು. ಅಷ್ಟರಲ್ಲಿ ದುರ್ಯೋಧನನು ನಾನು ಅರ್ಜುನನಿಗಿಂತಲೂ ಮೊದಲೇ ಬಂದವನು. ನಾನು

ಬಂದು ಬಹಳ ಹೊತ್ತಾಯಿತು. ಮೊದಲು ನನ್ನೊಂದಿಗೆ ಮಾತನಾಡಿ ನೀನು ನನಗೆ ಅಭಯವನ್ನು ಕೊಡಬೇಕೆಂದು ಬೇಡಿದನು. ಆಗ ಶ್ರೀಕೃಷ್ಣನು ದುರ್ಯೋಧನನ ಮುಖವನ್ನು ನೋಡಿದನು. ಅವನು ಅಲ್ಲಿ ಕುಳಿತಿದ್ದ ಸಂಗತಿ ಅವನ ಬಾಯಿಂದ ಮಾತು ಹೊರಡುವ ತನಕ ಶ್ರೀಕೃಷ್ಣನಿಗೆ ಗೊತ್ತಿಲ್ಲ. ಚಕ್ರವರ್ತಿಯಾದ ತಾನು ಕೃಷ್ಣನ ಕಾಲುಗಳ ಕಡೆ ಕುಳಿತು ಕೊಳ್ಳುವುದು ತನಗೆ ಅವಮಾನವೆಂದು ತಿಳಿದುಕೊಂಡೇ ಅವನ ತಲೆಯ ಕಡೆಗೆ ಸಿಂಹಾಸನದ ಮೇಲೆ ಕುಳಿತಿದ್ದನು. ಆಗ ಶ್ರೀಕೃಷ್ಣನು ದುರ್ಯೋಧನನನ್ನು ನೋಡಿ, ಎಲೈ ಸಾರ್ವಭೌಮನೇ ನೀನು ಮುಂದಾಗಿಯೇ ಬಂದಿರಬಹುದು. ಆದರೂ ಮೊದಲು ನನ್ನ ದೃಷ್ಟಿಗೆ ಕಾಣಿಸಿದವನು ಅರ್ಜುನನು. ಆದುದ ರಿಂದ ನಿಮ್ಮಿಬ್ಬರಿಗೂ ಒಂದೇ ವಿಧವಾದ ಹಕ್ಕಿರುವುದು. ನಾನು ನಿಮ್ಮಿಬ್ಬ ರಿಗೂ ಸಹಾಯಮಾಡುವೆನು. ನಿಮ್ಮಲ್ಲಿ ಒಬ್ಬರಿಗೆ ನನ್ನಲ್ಲಿರುವ ಸೈನ್ಯವ ನ್ನೆಲ್ಲಾ ಕೊಟ್ಟು ಕಳುಹುವೆನು, ಮತ್ತೊಬ್ಬರಿಗೆ ನಾನೇ ಸಹಾಯಕನಾಗಿ ಬರುವೆನು. ಆದರೆ ನಾನು ಬಾಣಗಳನ್ನು ಕೈಯಲ್ಲಿ ಹಿಡಿಯುವುದಿಲ್ಲ, ಯುದ್ಧವನ್ನು ಮಾಡುವುದಿಲ್ಲ. ಇವುಗಳಲ್ಲಿ ನಿಮನಿಮಗೆ ಬೇಕಾದುದನ್ನು ಕೇಳಿಕೊಳ್ಳಿರಿ ಎಂದು ಹೇಳಿದನು. ಇದಕ್ಕೆ ದುರ್ಯೋಧನನು ತನ್ನ ಮನಸ್ಸಿ ನಲ್ಲಿ, ಈ ಕೃಷ್ಣನು ತಾನು ಒಬ್ಬನೇ ಬರುವನಂತೆ! ತನ್ನ ಕೈಯಲ್ಲಿ ಬಾಣ ಹಿಡಿಯಲೊಲ್ಲನಂತೆ! ಇಂಥಾ ಅಪ್ರಯೋಜಕನನ್ನು ಕಟ್ಟಿಕೊಂಡು ಲಾಭ ವೇನು? ಇವನು ಬಾರದಿದ್ದರೆ ಎಷ್ಟು ಪ್ರಯೋಜನವೋ ಬಂದರೂ ಅಷ್ಟೇ ಪ್ರಯೋಜನವು. ಆದುದರಿಂದ ಇವನ ಸಹಾಯವೇನೂ ಬೇಡ. ಇವನ ಸೈನ್ಯದ ಸಹಾಯವನ್ನೆ ಕೋರಿಕೊಳ್ಳುವೆನು. ಯದುಸೈನ್ಯವು ಬಹಳ ಬಲವಾದುದು ಮತ್ತು ಅಸಂಖ್ಯಾತವಾದುದು. ಯುದ್ಧವಿದ್ಯೆಯಲ್ಲಿ ಚನ್ನಾಗಿ ಅಭ್ಯಾಸಗೊಂಡು ಹೆಸರುವಾಸಿ ಪಡೆದಿದೆ ಎಂದು ಯೋಚಿಸಿ ತನಗೆ ಸೈನ್ಯ ವನ್ನೇ ಸಹಾಯವಾಗಿ ಕೊಡಬೇಕೆಂದು ಬೇಡಿದನು. ಆಗ ಅರ್ಜುನನು ಕೃಷ್ಣನಿಗೆ ಕೈಮುಗಿದ ಮುಹಾಸ್ವಾಮಿ! ನಾವು ಬಹು ಬಡವರು, ನಿನ್ನ ಮಹಾ ಸೈನ್ಯಕ್ಕೆ ಆಹಾರಸಾಮಗ್ರಿಗಳನ್ನು ಒದಗಿಸಲಿಕ್ಕೆ ನಮಗೆ ಚೈತನ್ಯವಿಲ್ಲ.

ನೀನೊಬ್ಬನಿದ್ದರೆ ನಮಗೆ ಅಷ್ಟೇ ಸಾಕು ಎಂದು ಪ್ರಾರ್ಥಿಸಿದನು. ಆಗ ಶ್ರೀ ಕೃಷ್ಣನು ಅವರಿಬ್ಬರ ಕೋರಿಕೆಗಳನ್ನು ನೆರವೇರಿಸುವೆನೆಂದು ಹೇಳಿದನು. ಬಳಿಕ ಆತನ ಅಪ್ಪಣೆ ಪಡೆದು ದುರ್ಯೋಧನನು ತನ್ನ ಪಟ್ಟಣಕ್ಕೆ ಹೊರಟು ಹೋದನು. ಬಳಿಕ ಕೃಷ್ಣನು ಅರ್ಜುನನನ್ನು ನೋಡಿ ಭಾವಾಜೀ! ನೀನು ನನ್ನ ಸೈನ್ಯವನ್ನು ಬಯಸದೆ ಕಾದಲಾರದ ನನ್ನನ್ನೇತಕ್ಕೆ ಕೋರಿದೆ? ಎಂದು ಕೇಳಿದನು. ಅದಕ್ಕೆ ಅರ್ಜುನನು ಸ್ವಾಮಿಾ! ಬಾಲ್ಯದಿಂದಲೂ ನೀನು ನಮ್ಮನ್ನು ಯಾವ ತೊಂದರೆಗೂ ಸಿಕ್ಕದಂತೆ ಸಲಹಿದೆ. ಹಲವು ವಿಪತ್ತು ಕಾಲಗಳಲ್ಲಿ ನೀನೇ ಹೊರತು ನಿಮ್ಮ ಸೈನ್ಯಗಳಲ್ಲ. ನೀನೆಲ್ಲಿರುವೆಯೋ ಅಲ್ಲಿಯೇ ಜಯವೂ ಕೀರ್ತಿಯೂ ಲಭಿಸುವವೆಂದು ಬಲ್ಲವರೆಲ್ಲಾ ಹೇಳುವರು. ನೀನಿಲ್ಲದ ಸೈನ್ಯವು ನಮಗೇಕೆ? ನೀನೊಬ್ಬನು ನಮಗೆ ಸಹಾಯಕನಾಗಿದ್ದರೆ ಸಾಲದೇ? ಎಂದು ವಿನಯಪೂರ್ವಕವಾಗಿ ನುಡಿದನು. ಶ್ರೀ ಕೃಷ್ಣನು ಅವನ ಮಾತಿಗೆ ಸಂತೋಷಿಸಿ ಅವನನ್ನು ಮನ್ನಿಸಿದನು.

ಇತರ ದೇಶದ ರಾಜರುಗಳಲ್ಲಿ ಕೆಲವರು ಕೌರವನಂಥವರೂ ಅವನ ಸಾಮಂತ ರಾಜರೂ ಆತನ ಪಕ್ಷಕ್ಕೆ ಹೋಗಿ ಸೇರಿದರು. ಧರ್ಮದೃಷ್ಟಿಯುಳ್ಳ ಕೆಲವು ರಾಜರು ಆ ಕೌರವರ ನಡತೆಗಳಿಗೆ ಒಪ್ಪದೆ ಪಾಂಡವರಿಗೆ ಸಹಾಯ ಮಾಡುವೆನೆಂದು ಅವರಿಗೆ ಬರೆದು ತಿಳಿಸಿದರು. ಎಲ್ಲರೂ ತಮ್ಮ ತಮ್ಮ ಸೈನ್ಯಗಳನ್ನು ಹಿಂದಿಟ್ಟುಕೊಂಡು ಯುದ್ಧಭೂಮಿಗೆ ಬರುತ್ತಲಿದ್ದರು. ಯುಧಿಷ್ಠಿರನ ಕಡೆಗೆ ಏಳು ಅಕ್ಷೋಹಿಣೀ ಸೈನ್ಯವೂ ದುರ್ಯೋಧನನ ಕಡೆಗೆ ಹನ್ನೊಂದಕ್ಷೋಹಿಣೀ ಸೈನ್ಯವೂ ಬಂದು ಸೇರಿದವು. ಒಂದು ಅಕ್ಷೋಹಿಣಿ ಎಂದರೆ ಇಪ್ಪತ್ತೊಂದು ಸಾವಿರದ ಎಂಟುನೂರ ಎಪ್ಪತ್ತು ಆನೆಗಳೂ, ಅಷ್ಟೇ ರಥಗಳೂ ಅವುಗಳ ಮೂರರಷ್ಟು ಕುದುರೆಗಳೂ ಐದರಷ್ಟು ಕಾಲಾಳುಗಳೂ ಇರುವ ಸೈನ್ಯವು ಅಂದರೆ ಒಟ್ಟು ಎರಡು ಲಕ್ಷವೂ ಹದಿನೆಂಟುಸಾವಿರದ ಏಳನೂರು ಸೇನೆಗಳಾಗುವುವು. ಉಭಯ ಸೇನೆಗಳಲ್ಲಿಯೂ ಸೇರಿ ಇಂತಹ ಹದಿನೆಂಟು ಅಕ್ಷೋಹಿಣೀ ಸೈನ್ಯವು ಸೇರಿತ್ತೆಂದು ಈ ಗ್ರಂಥದಿಂದ ತಿಳಿಯಬರುವುದು. ಈ ಇತಿಹಾಸ

ದಲ್ಲಿ ಹದಿನೆಂಟೆಂಬ ಸಂಖ್ಯೆಗೆ ಪ್ರಾಮುಖ್ಯ ಬಂದಿರುವುದು. ಇದರಲ್ಲಿರುವ ಪರ್ವಗಳು ಹದಿನೆಂಟು. ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಭಗವದ್ಗೀತೆಯಲ್ಲಿರುವ ಅಧ್ಯಾಯಗಳು ಹದಿನೆಂಟು. ಈ ಗ್ರಂಥದ ಕಥಾನಾಯಕನಾದ ಅರ್ಜುನನಿಗೆ ಜಯನೆಂಬ ಹೆಸರು. ಈ ಶಬ್ದಕ್ಕೂ ಸಂಸ್ಕೃತದಲ್ಲಿ ಹದಿನೆಂಟು ಅರ್ಥಗಳಿರುವವು. ಅದರಂತೆಯೇ ನಮ್ಮ ಪುಸ್ತಕದಲ್ಲಿಯೂ ಹದಿನೆಂಟು ಪಾಠಗಳನ್ನೂ, ಹದಿನೆಂಟು ಮಂದಿ ವೀರರ ಕಥೆಗಳನ್ನೂ ಕೊಟ್ಟಿರುವೆವು. ಈ ವಿಷಯವನ್ನು ಇಲ್ಲಿಗೆ ನಿಲ್ಲಿಸಿ ಮುಂದಿನ ಕಥಾಭಾಗವನ್ನು ಆರಂಭಿಸೋಣ.

---

## ಹದಿಮೂರನೆಯ ಪಾಠ

ದ್ರುಪದನ ಪುರೋಹಿತನು ಹಸ್ತಿನಾಪುರಕ್ಕೆ ಹೋಗಿ ದುರ್ಯೋಧನನನ್ನು ಕಾಣಿಸಿಕೊಂಡನು. ತಾನು ಬಂದ ಸಂಗತಿಯನ್ನು ತಿಳಿಸಿ ಮಹಾರಾಜನೇ! ಪ್ರಭುತ್ವಕ್ಕೆ ಹಕ್ಕುದಾರರಾದ ಪಾಂಡವರಿಗೆ ಅವರ ದಾಯಭಾಗವನ್ನು ಕೊಡುವುದು ಉಚಿತವಾಗಿರುವುದು. ದಯಮಾಡಿ ಅದನ್ನು ಕೊಡಿಸು ಎಂದು ಕೇಳಿದನು. ಸಭೆಯಲ್ಲಿದ್ದ ದ್ರೋಣ, ಭೀಷ್ಮಾದಿವೃದ್ಧರೂ, ಇತರ ಬುದ್ಧಿವಂತರೂ ಇದಕ್ಕೆ ಸಮ್ಮತಿಸಿ ನಾವು ಪಾಂಡವರ ಸಂಗಡ ಮಾತನಾಡಲಿಕ್ಕೆ ಸಂಜಯನನ್ನು ಕಳುಹಿಸುವೆವು ಎಂದು ಹೇಳಿ ಆತನಿಗೆ ಅಪ್ಪಣೆಯನ್ನು ಕೊಟ್ಟು ಕಳುಹಿದರು. ಕೌರವರು ಸಂಜಯನನ್ನು ರಾಯಭಾರಿಯಾಗಿ ಕಳುಹಿಸಿದರು. ಅವನು ಧರ್ಮರಾಯನ ಬಳಿಗೆ ಹೋಗಿ ಆತನನ್ನು ಕಾಣಿಸಿಕೊಂಡನು. ಆ ರಾಯನು ಉಚಿತ ರೀತಿಯಿಂದ ಸಂಜಯನನ್ನು ಸತ್ಕರಿಸಿದನು. ರಕ್ತಪಾತವಿಲ್ಲದೆ ನಮಗೆ ಬರಬೇಕಾದ ದಾಯಭಾಗವನ್ನು ನಮಗೆ ಕೊಟ್ಟುಬಿಟ್ಟರೆ ಯುದ್ಧ ಮಾಡುವ ಪ್ರಮೇಯವೇ ಇಲ್ಲ, ಯುದ್ಧಮಾಡಬೇಕೆಂಬ ಹಟವೂ ನಮಗಿಲ್ಲ, ಎಂದು ಯುಧಿಷ್ಠಿರನು ಹೇಳಿದನು. ಶ್ರೀಕೃಷ್ಣನೂ ಇದಕ್ಕೆ ಒಪ್ಪಿದನು. ಸಂಜಯನು ಅವರ ಅಪ್ಪಣೆಯನ್ನು ಪಡೆದು ಧೃತರಾಷ್ಟ್ರನ ಬಳಿಗೆ ಹೋಗಿ ಪಾಂಡವರ

ಅಭಿಪ್ರಾಯವನ್ನು ತಿಳಿಸಿದನು. ಆ ರಾಜನು ಅದಕ್ಕೆ ಸಮ್ಮತಿಸಿ ತನ್ನ ಮಗನನ್ನು ಕರೆದು ದುರ್ಯೋಧನಾ! ಈ ರಾಜ್ಯದ ಅರ್ಧಭಾಗವು ಪಾಂಡವರಿಗೆ ಸೇರತಕ್ಕದ್ದು. ಆದುದರಿಂದ ಅವರ ಅರ್ಧಭಾಗವನ್ನು ಅವರಿಗೆ ಒಪ್ಪಿಸಿ ಯುದ್ಧಪ್ರಸ್ತಾಪವನ್ನೆ ಬಿಟ್ಟುಬಿಡು ಎಂದು ಹೇಳಿದನು. ಭೀಷ್ಮಾದಿಗಳೂ ಇದು ನ್ಯಾಯವೆಂದು ಹೇಳಿದರು. ಮೂರ್ಖನಾದ ದುರ್ಯೋಧನನು ಅವರ ಮಾತುಗಳನ್ನು ಗಣನೆಗೆ ತರಲಿಲ್ಲ. ಪಾಂಡವರಿಗೆ ಗೋಷ್ಪಾದ ಊರುವಷ್ಟು (ಅಂದರೆ ಆಕಳ ಹೆಜ್ಜೆಯಷ್ಟು) ನೆಲವನ್ನು ಕೂಡ ಕೊಡಲೊಲ್ಲೆನು. ಅವರಿಗೆ ರಾಜ್ಯವು ಬೇಕಾಗಿದ್ದರೆ ಯುದ್ಧ ಮಾಡಿ ಗೆದ್ದು ಪೂರಾ ರಾಜ್ಯವನ್ನೇ ತೆಗೆದುಕೊಂಡು ಆಳಲಿ; ಸೂಜಿಯ ಮೊನೆಯಷ್ಟು ನೆಲವನ್ನು ಕೂಡಾ ನಾನು ಅವರಿಗೆ ಉಚಿತವಾಗಿ ಕೊಡಲೊಲ್ಲೆನು ಎಂದು ಹಟಹಿಡಿದನು. ಕರ್ಣನೂ ಅವನ ಇಷ್ಟದಂತೆಯೇ ಒಪ್ಪಿಕೊಂಡನು. ಅವನ ಮುಖ್ಯ ಮಂತ್ರಿಗಳಿಗೆಲ್ಲಾ ಇದೇ ಅಭಿಪ್ರಾಯವೇ ಹುಟ್ಟಿತು; ಯುದ್ಧ ಮಾಡಿದ ಹೊರತು ರಾಜ್ಯಸಿಕ್ಕುವುದಿಲ್ಲವೆಂತಲೂ ಬಹು ದಿನಗಳಿಂದ ಘೋರ ಯುದ್ಧಗಳು ನಡೆಯದೆ ಇರುವುದರಿಂದ ಭೂದೇವಿಯು ರಕ್ತಪಾನವನ್ನು ಬಯಸಿರುವಳೆಂತಲೂ ಎಲ್ಲರೂ ನಿಶ್ಚಯಿಸಿದರು.

ದುರ್ಯೋಧನನ ಮನಸ್ಸನ್ನು ಯಾವ ರೀತಿಯಿಂದಲಾದರೂ ಮರಳಿಸಿ ಯುದ್ಧವನ್ನು ತಪ್ಪಿಸಬೇಕೆಂಬ ಅಭಿಪ್ರಾಯವು ಶ್ರೀಕೃಷ್ಣನಿಗೆ ಹುಟ್ಟಿತು. ಇದಕ್ಕೋಸ್ಕರ ತಾನೇ ಸ್ವತಃ ರಾಯಭಾರಿಯಾಗಿ ಹೋಗಿ ದುರ್ಯೋಧನನಿಗೆ ತಿಳಿಯಹೇಳಬೇಕೆಂದು ಆಲೋಚಿಸಿದನು. ಅವನು ಪ್ರಯಾಣ ಮಾಡುವುದಕ್ಕೆ ಮುಂಚೆ ಧರ್ಮರಾಯನು ಆತನನ್ನು ನೋಡಿ ಮಹಾತ್ಮಾಜೀ! ನಮಗೋಸ್ಕರ ಆ ಕೌರವರು ನಿನ್ನನ್ನು ದೂಷಿಸುವರು, ಅವಮಾನಪಡಿಸುವರು, ಹಲವು ದುರ್ಭಾಷೆಗಳಿಂದ ಬೈಯುವರು, ನಿನಗೆ ಬಹಳ ಹಿಂಸೆ ಕೊಡುವರು. ಆದುದರಿಂದ ನೀನು ಅವರ ಬಳಿಗೆ ಹೋಗುವುದು ಸರಿಯಲ್ಲ; ಇನ್ನೂ ಒಂದು ಸಾರಿ ಯಾರನ್ನಾದರೂ ಕಳುಹಿಸಿಕೊಡೋಣ ಎಂದು ಬೇಡಿಕೊಂಡನು. ಅದಕ್ಕೆ ಶ್ರೀಕೃಷ್ಣನು ಎಲೈ ಯುಧಿಷ್ಠಿರ! ಲೋಕಹಿತವೇ ನಮಗೆ ಮುಖ್ಯ

ವಾದ ಕೆಲಸ. ನನಗೆ ಸಂಭವಿಸುವ ಮಾನಾಪಮಾನಗಳನ್ನು ನಾನು ಲಕ್ಷ್ಯಮಾಡತಕ್ಕವನಲ್ಲ. ಈ ಯುದ್ಧವನ್ನು ತಪ್ಪಿಸುವುದರಿಂದ ಲೋಕಕ್ಕೆಷ್ಟೋ ಕ್ಷೇಮವುಂಟಾಗುವುದು. ನಾನು ಯಾವಾಗಲೂ ಜನರ ಹಿತವನ್ನೇ ಬಯಸುತ್ತಿರುವೆನು. ಇದರಿಂದ ನಿಮಗೂ ಲೋಕನಿಂದೆ ತಪ್ಪುವುದು. ನನ್ನನ್ನು ತಡೆಯಬೇಡ ಎಂದು ಹೇಳಿ ಆತನ ಅಪ್ಪಣೆ ಪಡೆದು ಹಸ್ತಿನಾಪುರಕ್ಕೆ ಹೋದನು. ಅಲ್ಲಿ ಆತನು ಕೌರವರ ಮನೆಯಲ್ಲಿ ಇಳಿಯಲಿಲ್ಲ. ತನ್ನ ಭಕ್ತನಾದ ವಿದುರನ ಮನೆಯಲ್ಲಿ ಇಳಿದನು. ಆತನು ಮೊದಲು ಧೃತರಾಷ್ಟ್ರರಾಯನನ್ನು ನೋಡಿ ತಾನು ಬಂದ ಕಾರ್ಯವನ್ನು ತಿಳಿಸಿದನು. ಬಳಿಕ ವಿದುರನನ್ನು ನೋಡಿ ಮುಂದಿನ ಕಾರ್ಯವನ್ನು ಆಲೋಚಿಸಿದನು. ತನ್ನ ಸೋದರತ್ತೆಯಾದ ಕುಂತಿಯನ್ನು ಕಂಡು ಪಾಂಡವರ ಕ್ಷೇಮವನ್ನು ತಿಳಿಸಿ ತಾನು ಬಂದಿರುವ ಕಾರ್ಯವನ್ನು ಆಕೆಗೆ ಅರಿಕೆಮಾಡಿದನು. ಅನಂತರ ದುರ್ಯೋಧನಾದಿಗಳನ್ನು ಕಂಡು ಮಾತನಾಡಿದನು. ಕುರುರಾಯನು ಒಂದು ದೊಡ್ಡ ಸಭೆ ಸೇರಿಸಿದನು. ಆಗ ದುರ್ಯೋಧನನು ಶಕುನಿಯನ್ನು ಕಳುಹಿ ಶ್ರೀಕೃಷ್ಣನನ್ನು ಸಭೆಗೆ ಬರಮಾಡಿಕೊಂಡನು. ಆ ಒಡ್ಡೋಲಗದಲ್ಲಿ ಶ್ರೀಕೃಷ್ಣನು ತಾನು ಬಂದಿದ್ದ ಕೆಲಸವನ್ನು ಸಭಿಕರಿಗೆಲ್ಲಾ ವಿಜ್ಞಾಪಿಸಿ ಇಂತೆಂದನು, ಮಹಾಶಯರೇ! ನಾನು ಬಂದಿರುವುದು ಘೋರಯುದ್ಧವನ್ನು ತಪ್ಪಿಸಬೇಕೆಂಬ ಉದ್ದೇಶದಿಂದಲೇ ಹೊರತು ರಕ್ತಪಾತಮಾಡಿಸಿ ಪ್ರಜಾಲಯ ಮಾಡಿಸಬೇಕೆಂಬ ಅಭಿಪ್ರಾಯದಿಂದಲ್ಲ. ಸಹೋದರರಾದ ನೀವುಗಳು ಅನ್ಯಾಯವಾಗಿ ಯುದ್ಧಮಾಡಿ ಏತಕ್ಕೆ ನಷ್ಟವನ್ನು ಪಡೆಯುವಿರಿ? ಇದರಿಂದ ಯಾರಿಗಾದರೂ ಕ್ಷೇಮವುಂಟೇ? ಯುದ್ಧದಲ್ಲಿ ಎಷ್ಟೋಮಂದಿ ಸಾಯುವರು; ಹಲವು ವಂಶಗಳು ಹಾಳಾಗುವುವು. ಇದಕ್ಕೆ ಅವಕಾಶಕೊಡದೆ ನೀವು ನೀವು ಅನ್ಯೋನ್ಯವಾಗಿ ಸ್ನೇಹದಿಂದಿರಿ ಎಂದು ಹಲವು ವಿಧವಾಗಿ ಬೋಧಿಸಿದನು. ಅಲ್ಲಿಗೆ ಬಂದಿದ್ದ ಮಹರ್ಷಿಗಳೂ ಭೀಷ್ಮದ್ರೋಣ, ವಿದುರಾದಿ ಹಿರಿಯರೂ ತಿಳಿಯಹೇಳಿದರು. ಧೃತರಾಷ್ಟ್ರನೂ ತನ್ನ ಮಗನಿಗೆ ಬುದ್ಧಿ ಹೇಳಿದನು. ಯುದ್ಧ ಮಾಡಬೇಕೆಂಬ ವಿಷಯದಲ್ಲಿ ಒಬ್ಬನಿಗಾದರೂ

ಸಮ್ಮತವಿಲ್ಲ. ದುರ್ಯೋಧನನ ಕಡೆ ದುಷ್ಟಚತುಷ್ಟಯಕ್ಕೆ ಮಾತ್ರ ಯುದ್ಧ ಮಾಡಲೇ ಬೇಕೆಂಬ ಹಟ. ಆ ಮೂರ್ಖನು ಯಾವ ಮಾತನ್ನೂ ಕೇಳಲಿಲ್ಲ. ಅವನು ಶ್ರೀಕೃಷ್ಣನನ್ನು ಗದರಿಕೊಂಡು ನಾನಾ ದುರ್ಭಾಷೆಗಳಿಂದ ಆ ಮಹಾತ್ಮನನ್ನು ನಿಂದಿಸಿದನು. ನೀನು ಕುಲಹೀನನು, ಬೆಣ್ಣೆಗಳ್ಳನು, ಜಾರನು, ಮೋಸಗಾರನು ಎಂದು ಹಲವು ವಿಧವಾಗಿ ದೂಷಿಸಿದನು. ಯಾರು ಎಷ್ಟು ಹೇಳಿದರೂ ನಾನು ಪಾಂಡವರಿಗೆ ರಾಜ್ಯವನ್ನು ಕೊಡಲೊಲ್ಲೆನು. ಬೇಕಾದರೆ ಅವರನ್ನು ಕರೆದುಕೊಂಡು ಬಂದು ಯುದ್ಧ ಮಾಡಿಸು ಎಂದು ಹೇಳಿ ಬಿಟ್ಟನು.

ಇಷ್ಟಾದರೂ ಶ್ರೀಕೃಷ್ಣನು ಕೋಪಿಸಿಕೊಳ್ಳಲಿಲ್ಲ. ಅವನು ದುರ್ಯೋಧನನನ್ನು ನೋಡಿ, ಭಾವಾ! ನೀನು ಏಕೆ ಇನ್ನೂ ಈ ಮೂರ್ಖತನವನ್ನು ಬಿಟ್ಟಿಲ್ಲ? ಇಷ್ಟು ಮಂದಿ ಮಹಾಪುರುಷರಿಗಿಂತಲೂ ನೀನು ಪ್ರಾಜ್ಞನೇ! ಆ ಪಾಂಡವರು ನಿನಗೆ ಅನ್ಯರೇ? ಈ ರಾಜ್ಯವು ಯಾರದು? ನೀನು ಎಷ್ಟೆಷ್ಟು ಕಷ್ಟಗಳನ್ನು ಕೊಟ್ಟರೂ ಸೈರಿಸಿಕೊಂಡು ಆ ಪಾಂಡವರು ಧರ್ಮಮಾರ್ಗವನ್ನು ಬಿಡದೆ ನಡೆಯುತ್ತಿರುವರಲ್ಲಾ! ನೀನು ಅವರ ಮೇಲೆ ಯಾವ ಅಪರಾಧವನ್ನು ಹೊರಿಸುವೆ? ಇನ್ನೂ ಒಂದುಸಾರಿ ಯೋಚನೆ ಮಾಡಿ ನೋಡು. ಅನ್ಯಾಯವಾಗಿ ನೀನು ನಾಶವಾಗುವುದಲ್ಲದೆ ನಿನ್ನ ಕುಲವನ್ನೇ ಹಾಳು ಮಾಡಿಕೊಂಡು ಅಪಕೀರ್ತಿಯ ಪಾಲಾಗುವೆ ಎಂದು ಬುದ್ಧಿಹೇಳಿದನು. ದುರ್ಯೋಧನನು ಈ ಮಾತುಗಳಿಗೆ ಕಿವಿಗೊಡದೆ ಸಭೆಯಿಂದ ಹೊರಟು ಹೋದನು. ದುಶ್ಶಾಸನನು, ಕರ್ಣನು ಮೊದಲಾದ ಅವನ ಮಿತ್ರರೆಲ್ಲಾ ಅವನ ಸಂಗಡಲೇ ಹೊರಟುಹೋದರು. ಆಗ ಶ್ರೀಕೃಷ್ಣನು ಸಭಿಕರನ್ನು ನೋಡಿ ಕ್ಷತ್ರಿಯರನ್ನೆಲ್ಲಾ ಕೊಂದುಹಾಕಲಿಕ್ಕೆ ಹುಟ್ಟಿರುವ ಈ ದುರ್ಯೋಧನ ಮೊದಲಾದ ನಾಲ್ವರನ್ನು ಹಿಡಿದು ಕಟ್ಟಿ ಒಪ್ಪಿಸಿದರೆ ಮೇಲೆಂದು ಹೇಳಿದನು. ಈ ಸುದ್ದಿ ಕೌರವರಿಗೆ ತಿಳಿಯಿತು. ಅವನು ಶ್ರೀಕೃಷ್ಣನನ್ನೇ ಕಟ್ಟಹಾಕಬೇಕೆಂದು ಪ್ರಯತ್ನಪಟ್ಟು ಅದಕ್ಕಾಗಿ ಕೆಲವು ಹಗ್ಗಗಳನ್ನು ತೆಗೆಸಿಕೊಂಡು ಸಭೆಗೆ ಬಂದನು. ಆಹಾ! ಶ್ರೀಕೃಷ್ಣನ ಮಹಿಮೆ ಎಂಥಾದೊ? ಎಲ್ಲರೂ ಶ್ರೀಕೃಷ್ಣಸ್ವರೂಪವೇ ಆಗಿದ್ದರು. ನಿಜವಾದ ಶ್ರೀಕೃಷ್ಣನು ಯಾರೆಂಬದು

ಗೊತ್ತೇ ಆಗಲಿಲ್ಲ. ಯಾರನ್ನು ಕಟ್ಟಬೇಕು. ಕೊನೆಗೆ ನಿಜಸ್ಥಿತಿ ಗೊತ್ತಾಗದೆ ಭಗ್ನಮನೋರಥವಾಗಿ ಅವರೆಲ್ಲಾ ತಮ್ಮತಮ್ಮ ಮನೆಗೆ ಹೊರಟುಹೋದರು. ಆಗ ಶ್ರೀಕೃಷ್ಣನು ಕರ್ಣನನ್ನು ತನ್ನ ರಥದ ಮೇಲೆ ಕುಳ್ಳಿರಿಸಿಕೊಂಡು ಸ್ವಲ್ಪ ದೂರಹೋಗಿ ಅವನ ಜನ್ಮವೃತ್ತಾಂತವನ್ನು ತಿಳಿಸಿದನು. "ಅಣ್ಣಾ! ನೀನೇ ಈ ಕೌರವ ಪಾಂಡವರಿಗೆಲ್ಲಾ ಹಿರಿಯನು; ನೀನು ಕುಂತಿಯ ಮಗನಾದುದ ರಿಂದ ಪಾಂಡವರ ಕಡೆ ಸೇರಿ ಯುದ್ಧಮಾಡು. ಧರ್ಮರಾಯನಿಗಿಂತ ನೀನು ದೊಡ್ಡವನಾದುದರಿಂದ ನಿನಗೇನೇ ಪಟ್ಟಕಟ್ಟಿ ಐವರು ತಮ್ಮಂದಿರೂ ನಿನ್ನನ್ನು ಓಲೈಸುತ್ತಿರುವರು; ನನ್ನ ಮಾತು ನಿಜವೆಂದು ನಂಬು. ಒಡಹುಟ್ಟಿದವರನ್ನು ಕೈಬಿಡಬೇಡ" ಎಂದು ಉಪದೇಶಮಾಡಿದನು. ಕರ್ಣನು ವಿನಯದಿಂದ ಆ ಮಹಾತ್ಮನಿಗೆ ಕೈ ಮುಗಿದು "ಸ್ವಾಮಿ ತಮ್ಮ ಮಾತಿನಲ್ಲಿ ನನಗೆ ಸಂಪೂರ್ಣ ಗೌರವವಿದೆ; ನನ್ನ ತಾಯಿ ನನ್ನನ್ನು ಹೆತ್ತಾಗಲೇ ನಿಷ್ಕರುಣೆಯಿಂದ ತ್ಯಜಿಸಿಬಿಟ್ಟಳು. ಅಧಿರಥನೆಂಬ ಬೆಸ್ತರವನೂ ರಾಧೆಯೆಂಬ ಅವನ ಹೆಂಡತಿ ಯೂ ನನ್ನನ್ನು ಸಾಕಿ ಸಲಹಿ ಬೆಳಿಸಿ ವಿದ್ಯಾಬುದ್ಧಿಗಳನ್ನು ಕಲಿಸಿಕೊಟ್ಟರು. ನಿಜವಾಗಿ ಅವರೇ ನನ್ನ ತಾಯಿತಂದೆಗಳೆಂದು ತಿಳಿದುಕೊಂಡಿರುವೆನು. ರಾಜರಾಜನಾದ ಕುರುಪತಿಯು ನನ್ನನ್ನೇ ನಂಬಿಕೊಂಡು ಅವನ ಸರ್ವಸ್ವ ವನ್ನೂ ನನಗೆ ಒಪ್ಪಿಸಿರುವನು. ಆತನ ಉಪ್ಪು ತಿಂದು ಅವನಿಗೆ ಅನ್ಯಾಯ ಮಾಡುವುದಕ್ಕೆ ನನ್ನ ಮನಸ್ಸು ಒಪ್ಪುವುದೇ? ಐಶ್ವರ್ಯವೂ, ರಾಜಭೋಗಗಳೂ ಸ್ಥಿರವಲ್ಲ; ಧರ್ಮದೇವತೆಯು ಉಚಿತಕಾರ್ಯವನ್ನು ಮೆಚ್ಚುವಳು; ನಾನು ಲೋಕಾಪವಾದಕ್ಕೆ ಗುರಿಯಾಗಲಾರೆನು. ನಾನು ಬದುಕಿದರೂ ಸತ್ತರೂ ಕೌರವಪಕ್ಷದವನಾಗಿಯೇ ಇರಬೇಕೇ ಹೊರತು ಪಾಂಡವರ ಪಕ್ಷಕ್ಕೆ ಸೇರ ಲೊಲ್ಲೆನು; ಕ್ಷಮಿಸಬೇಕು ಎಂದು ಪ್ರಾರ್ಥಿಸಿದನು. ಶ್ರೀಕೃಷ್ಣನು ಅವನ ಮನೋದಾರ್ಢ್ಯಕ್ಕೆ ಮೆಚ್ಚಿ ಅವನನ್ನು ಹಿಂದಕ್ಕೆ ಕಳುಹಿಸಿದನು.

ಬಳಿಕ ಆತನು ಕುಂತಿಯ ಬಳಿಗೆ ಹೋಗಿ ಆಕೆಯು ಹೇಳತಕ್ಕ ಮಾತುಗಳನ್ನು ತಿಳಿಸಿ, ಕರ್ಣನು ಸ್ನಾನಮಾಡುತ್ತಿರುವಾಗ ಆತನಿಂದ ಒಂದೆ ರಡು ವಾಗ್ದಾನಗಳನ್ನು ಪಡೆಯಬೇಕೆಂದು ಯೋಚಿಸಿ ಅವಳ ಅಪ್ಪಣೆ ಪಡೆದು

ಪಾಂಡವರಿದ್ದ ಕಡೆಗೆ ಹೊರಟುಹೋದನು. ಉಭಯಪಕ್ಷದವರು ಬಹು ಆತುರದಿಂದ ಯುದ್ಧಪ್ರಯತ್ನಗಳನ್ನು ಮಾಡಿದರು. ಪಾಂಡವರ ಕಡೆ ಏಳು ಅಕ್ಷೋಹಿಣೀ ಸೈನ್ಯವೂ ಕೌರವರ ಕಡೆ ಹನ್ನೊಂದು ಅಕ್ಷೋಹಿಣೀ ಸೈನ್ಯವೂ ಬಂದು ಸೇರಿದವು. ಈ ಮಹತ್ಸೈನ್ಯವೆಲ್ಲಾ ಕುರುಕ್ಷೇತ್ರದ ಬಳಿಯಲ್ಲಿ ಬಂದು ಬೀಡುಬಿಟ್ಟಿತು.

---

## ಹದಿನಾಲ್ಕನೆಯ ಪಾಠ.

ಇಲ್ಲಿಗೆ ಶ್ರೀಕೃಷ್ಣನ ರಾಯಭಾರವು ಮುಗಿಯಿತು. ಮುಂದೆ ಭೀಷ್ಮ ಪರ್ವದ ಕಥೆಯನ್ನು ಹೇಳುವೆನು ಕೇಳಿ. ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ್ದ ವಾಗ್ದಾನದಂತೆ ಅವನಿಗೆ ಸಾರಥಿಯಾಗಿ ರಥವನ್ನು ನಡೆಯಿಸಿಕೊಂಡು ಕುರುಕ್ಷೇತ್ರದ ಯುದ್ಧಭೂಮಿಯಲ್ಲಿ ಉಭಯ ಸೇನೆಗಳಿಗೂ ಮಧ್ಯದಲ್ಲಿ ಅದನ್ನು ತಂದು ನಿಲ್ಲಿಸಿದನು. ಅರ್ಜುನನು ಎರಡು ಕಡೆಯ ಸೇನೆಯನ್ನೂ ನೋಡಿ ಕೃಷ್ಣನ ಮೂಲಕ ಅವರ ಕುಲಗೋತ್ರಗಳನ್ನು ಕೇಳಿ ತಿಳಿದುಕೊಂಡನು. ಶತ್ರು ಪಕ್ಷದಲ್ಲಿ ಭೀಷ್ಮಾಚಾರ್ಯರೂ, ದ್ರೋಣಾಚಾರ್ಯರೂ, ಕೃಪಾಚಾರ್ಯರೂ ಮೊದಲಾದವರೂ ಇನ್ನೂ ಇತರ ಗುರುಹಿರಿಯರೂ ತಮ್ಮ ಆಪ್ತಜನರೂ ಇದ್ದರು. ಅವರನ್ನು ನೋಡಿ ಅರ್ಜುನನು ವಿಚಾರಗ್ರಸ್ತನಾಗಿ ಅಯ್ಯೋ ಏನು ಅನ್ಯಾಯ! ಬಂಧು ಜನರನ್ನೂ, ಸ್ನೇಹಿತರನ್ನೂ, ಗುರು ಹಿರಿಯರನ್ನೂ ಮನ್ನಿಸದೆ ಅವರ ಮೇಲೆ ಕೈ ಎತ್ತಿ ಯುದ್ಧಮಾಡಬೇಕಾಗಿ ಬಂತಲ್ಲಾ! ಎಂದು ಬಹಳವಾಗಿ ಚಿಂತಿಸಿದನು. ಅವನ ಮೈಯಲ್ಲಿ ಬೆವರು ಕಿತ್ತು ಕೊಂಡಿತು, ಕೈಕಾಲುಗಳು ತಣ್ಣಗಾದವು, ಮೈ ನಡುಗಿತು. ಅವನ ಗಾಂಡೀವವೆಂಬ ಧನುಸ್ಸು ಕೈಯಿಂದ ಜಾರಿ ಕೆಳಕ್ಕೆ ಬಿತ್ತು. ಬಳಿಕಲಾ ಮಹಾ ವೀರನು ಮೌನವಾಗಿ ಒಂದು ಕಡೆ ಕುಳಿತುಕೊಂಡನು. ಅವನು ಶ್ರೀಕೃಷ್ಣನನ್ನು ಕುರಿತು, ಸ್ವಾಮೀ, ನನಗೆ ಯುದ್ಧಮಾಡಬೇಕೆಂಬ ಅಪೇಕ್ಷೆಯಿಲ್ಲ, ರಾಜ್ಯದ ಅಪೇಕ್ಷೆ ಮೊದಲೇ ಇಲ್ಲ. ನಮ್ಮನ್ನು ಕೈಹಿಡಿದು ಸಾಕಿ ಸಲಹಿದ ಅಜ್ಜನೂ, ವಿದ್ಯೆ ಬೋಧಿಸಿದ ಗುರುವೂ, ಒಡಹುಟ್ಟಿದವರಾದ ಕೌರವರೂ,

ಮಿಕ್ಕ ಬಂಧುಜನರೂ ಇವರೊಂದಿಗೆ ಕಾದಿ ಇವರನ್ನು ರಣದಲ್ಲಿ ಸಂಹರಿಸಿ ಪಡೆಯುವ ರಾಜ್ಯಲಾಭಕ್ಕಿಂತಲೂ ನಾವೇ ಕಾಡಿಗೆ ಹೋಗಿ ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಸುಖವಾಗಿ ಜೀವಿಸುತ್ತಿರುವುದು ಲೇಸೆಂದು ತಿಳಿಯುತ್ತೇನೆ. ಅರ್ಜುನನು ಬಂಧುಮಿತ್ರರನ್ನು ಕೊಂದು ರಾಜ್ಯ ಸಂಪಾದಿಸಿದನೆಂಬ ಅಪಕೀರ್ತಿಗೆ ಗುರಿಯಾಗುವುದಕ್ಕಿಂತ ಈ ಮಾರ್ಗವೇ ಲೇಸೆಂದು ತಿಳಿಯುತ್ತೇನೆ. ದಯಮಾಡಿ ರಥವನ್ನು ಹಿಂದಕ್ಕೆ ತಿರುಗಿಸು; ಅಣ್ಣಯ್ಯನ ಅಪ್ಪಣೆ ಪಡೆದು ವನವಾಸಕ್ಕೆ ಹೊರಡೋಣ ಎಂದು ಹೇಳಿದನು.

ಅದರಂತೆ ಶ್ರೀಕೃಷ್ಣನು ತಾನು ದುಷ್ಟ ಶಿಕ್ಷೆಗೋಸ್ಕರ ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾಗುವುದೆಂದು ಚಿಂತಿಸಿ ಹೇಗಾದರೂ ಮಾಡಿ ಇವನನ್ನು ಯುದ್ಧಕ್ಕೆ ಹುರಿಗೊಳಿಸಬೇಕೆಂದು ಯೋಚಿಸಿ ಅವನಿಗೆ ಭಗವದ್ಗೀತೆಯನ್ನು ಉಪದೇಶಮಾಡತೊಡಗಿದನು. ಇದು ಹದಿನೆಂಟು ಅಧ್ಯಾಯಗಳುಳ್ಳ ದೊಡ್ಡ ಪುಸ್ತಕವು. ಮಾನವ ಧರ್ಮಗಳು ಇದರಲ್ಲಿ ವಿಶದವಾಗಿ ವಿವರಿಸಲ್ಪಟ್ಟಿರುವುವು. ಯುದ್ಧವನ್ನೊಲ್ಲದೆ ವಿರಕ್ತನಾಗಿ ಕುಳಿತಿದ್ದ ಅರ್ಜುನನ ಮನಸ್ಸನ್ನು ಲೌಕಿಕ ಮಾರ್ಗಕ್ಕೆ ತಿರುಗಿಸಿ ಅವನ ಕೈಯಿಂದ ಯುದ್ಧ ಮಾಡಿಸಿ ಪಾಂಡವರಿಗೆ ಜಯವನ್ನುಂಟುಮಾಡಿದ ಶ್ರೀಕೃಷ್ಣನ ಸಾಹಸವು ಎಷ್ಟು ಹೊಗಳಿದರೂ ತೀರದು. ಅದನ್ನೆಲ್ಲಾ ವಿಸ್ತಾರವಾಗಿ ಬರೆಯುವುದಕ್ಕಾಗಲಿ, ತಿಳಿದುಕೊಳ್ಳುವುದಕ್ಕಾಗಲಿ ನಿಮಗೆ ಈಗ ಹೊತ್ತಿಲ್ಲ. ನಾಲ್ಕು ಮಾತುಗಳಿಂದ ಅದರ ತಾತ್ಪರ್ಯವನ್ನು ಸಂಕ್ಷೇಪವಾಗಿ ಹೇಳಿಬಿಡುವೆನು, ಕೇಳಿರಿ!

**ಮನುಷ್ಯನು ತನಗೆ ಉಚಿತವಾದ ಕರ್ತವ್ಯವನ್ನು ಮಾಡಿಯೇ ತೀರಬೇಕು. ಅದಕ್ಕೆ ತಪ್ಪಕೂಡದು. ತನ್ನ ಕರ್ತವ್ಯವನ್ನು ಮಾಡುತ್ತಿರುವಾಗ ಅದರಲ್ಲಿ ಏನಾದರೂ ಕೇಡು ಸಂಭವಿಸಿದರೆ ಆ ಪಾಪವು ಅವನಿಗಿಲ್ಲ. ಕರ್ತವ್ಯವನ್ನು ನೆರವೇರಿಸದೆ ಬಿಟ್ಟುಬಿಟ್ಟರೆ ಸ್ವಧರ್ಮವನ್ನು ಪರಿತ್ಯಜಿಸಿದ ದೋಷವು ಬರುವುದು.**

**ಪರಧರ್ಮವನ್ನು ಅವಲಂಬಿಸಿ, ಲಾಭ ಪಡೆಯುವುದಕ್ಕಿಂತಲೂ ಸ್ವಧರ್ಮವನ್ನು ಹಿಡಿದುಕೊಂಡು ನಾಶಹೊಂದುವುದು ಲೇಸು. ಪ್ರತಿಯೊಬ್ಬನೂ, ಫಲಾಪೇಕ್ಷೆಯು ಇಲ್ಲದೆ ಕೆಲಸವಮಾಡಬೇಕು. ಮಾಡಿದ ಕೆಲಸವನ್ನೆಲ್ಲಾ ಭಗವಂತನಿಗೆ ಒಪ್ಪಿಸಿಬಿಡಬೇಕು. ಕೆಲಸ ಮಾಡುವುದಕ್ಕೆ ನಿನಗೆ ಸ್ವಾತಂತ್ರ್ಯವಿದೆಯೇ ಹೊರತು ಅದರ ಫಲ ವನ್ನು ಅನುಭವಿಸಲಿಕ್ಕೆ ಸ್ವಾತಂತ್ರ್ಯವಿಲ್ಲ. ನೀನು ತಿನ್ನುವುದು, ಕುಡಿಯುವುದು, ಉಡುವುದು, ಹೊದೆಯುವುದು ಮುಂತಾದ ಸಮಸ್ತ ಕರ್ತವ್ಯಗಳನ್ನೂ ಮಾಡಿ ಅವುಗಳನ್ನೆಲ್ಲಾ ನನಗೆ ಸಮ ರ್ಪಣೆ ಮಾಡು. ನಾನು ಪಕ್ಷಪಾತವಿಲ್ಲದೆ ಅವುಗಳಿಗೆ ತಕ್ಕ ಫಲಗಳನ್ನು ಕೊಡುತ್ತಾ ಬರುವೆನು.** ಬಳಿಕ ಅರ್ಜುನನು ಶ್ರೀಕೃಷ್ಣ ನನ್ನು ನೋಡಿ ತನ್ನ ಮನಸ್ಸಿನ ಸಂಶಯಗಳನ್ನೆಲ್ಲಾ ಹೇಳಿಕೊಂಡನು. ಶ್ರೀ ಕೃಷ್ಣನು ತಕ್ಕ ಸಮಾಧಾನ ಹೇಳಿ ಅವುಗಳನ್ನೆಲ್ಲಾ ಪರಿಹರಿಸಿದನು. ಅಲ್ಲಿಗೂ ಅವನ ಮನಸ್ಸಿನ ಅನುಮಾನ ಹರಿಯಲಿಲ್ಲ. ಆಗ ಶ್ರೀಕೃಷ್ಣನು ತನ್ನ ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದನು. ಆ ಕೃಷ್ಣನ ಹೊಟ್ಟೆ ಯಲ್ಲಿ ಸಮಸ್ತ ಲೋಕಗಳೂ ಇದ್ದವು. ಭೀಷ್ಮದ್ರೋಣಾದಿಗಳು ಕೌರವ ಪಾಂಡವರು ಚರಾಚರಾತ್ಮಕವಾದ ಸಮಸ್ತ ಜಗತ್ತು ಅಡಗಿತ್ತು. ಅದರಲ್ಲಿ ಅನೇಕರು ಸಾಯುತ್ತಲೂ ಅನೇಕರು ಮೂರ್ಛೆಬೀಳುತ್ತಲೂ, ಹೊಡೆದಾಡು ತ್ತಲೂ ಇದ್ದರು. ಆಗ ಅರ್ಜುನನು ಶ್ರೀಕೃಷ್ಣನನ್ನು ನೋಡಿ ಭಾವಾ! ಇವರನ್ನು ನೋಡಿದೆಯಾ! ಎಷ್ಟು ಮಂದಿ ಸತ್ತಿರುವರು, ಎಷ್ಟು ಜನ ಸಾಯಲಿಕ್ಕೆ ಸಿದ್ಧರಾಗಿರುವರು, ಮೊದಲೇ ಸತ್ತುಬಿದ್ದಿರುವವರನ್ನು ನೀನು ಕೊಲ್ಲುವುದೆಂದರೇನು, ನಿನಗೆ ಸ್ವತಂತ್ರವೆತ್ತಣದು? ಸಮಸ್ತವನ್ನೂ ನಾನೇ ಮಾಡಿಕೊಂಡುಹೋಗುವೆನು, ನೆವಮಾತ್ರಕ್ಕೆ ಒಬ್ಬ ಮನುಷ್ಯನನ್ನು ಗುರಿ ಮಾಡುವೆನು. ಈ ಸಮಸ್ತ ಜಗತ್ತೂ ನನ್ನ ಆಧೀನವಾಗಿರುವುದು. ಮನಸ್ಸು ಬಂದರೆ ನಾನು ಒಂದು ನಿಮಿಷದಲ್ಲಿಯೇ ಇದನ್ನೆಲ್ಲಾ ಲಯಮಾಡಿಬಿಡು ವೆನು. ಇಷ್ಟಪಟ್ಟರೆ ಕ್ಷಣಕಾಲದಲ್ಲಿ ಪುನಃ ಸೃಷ್ಟಿ ಮಾಡಬಲ್ಲೆನು.

ಅರ್ಜುನಾ! ನೀನು ಚಿಂತಿಸಬೇಡ. ಸಮಸ್ತ ಧರ್ಮಗಳನ್ನೂ ಬಿಟ್ಟುಬಿಡು. ನನಗೆ ಶರಣಾಗತನಾಗು, ನಾನು ನಿನಗೆ ಯಾವ ಪಾಪಗಳೂ ಇಲ್ಲದಂತೆ ಮಾಡಿ ಕಡೆಗೆ ಮೋಕ್ಷವನ್ನು ಅನುಗ್ರಹಿಸುವೆನು, ನೀನು ಚಿಂತಿಸಬೇಡ. ಪರಮೇಶ್ವರನನ್ನು ಸ್ಮರಿಸಿ ಯಾವ ಪ್ರತಿಫಲವನ್ನೂ ಆಶಿಸದೆ ಕರ್ತವ್ಯವನ್ನು ನೆರವೇರಿಸುವುದೇ ನಿಜವಾದ ಧರ್ಮವು. ಇದೇ ಪುಣ್ಯವು. ಇದೇ ಮೋಕ್ಷಸಾಧನವು.

ಈ ರೀತಿಯಲ್ಲಿ ಉಪದೇಶಿಸಿದ ಗ್ರಂಥಕ್ಕೆ ಭಗವದ್ಗೀತೆ ಎಂದು ಹೆಸರು. ಈ ಗ್ರಂಥವು ಪರಮ ಪವಿತ್ರವಾದುದೆಂದು ಸಮಸ್ತ ಜಾತಿಯ ಜನರಿಂದಲೂ ಆದರಿಸಲ್ಪಡುತ್ತಲಿದೆ. ಬಳಿಕ ಅರ್ಜುನನ ಮನಸ್ಸು ಲೌಕಿಕ ಮಾರ್ಗಕ್ಕೆ ತಿರುಗಿತು. ಅನಂತರ ಯುದ್ಧಕ್ಕೆ ಪ್ರಾರಂಭವಾಯಿತು. ಕೌರವರ ಕಡೆ ಭೀಷ್ಮಾಚಾರ್ಯನೂ ಪಾಂಡವರ ಕಡೆ ಭೀಮಸೇನನೂ ದಳಪತಿಗಳಾಗಿ ನೇಮಕವಾದರು. ಅರ್ಜುನನ ಮನಸ್ಸು ಲೌಕಿಕ ಮಾರ್ಗಕ್ಕೆ ತಿರುಗಿ ಶಕ್ತಿ ಇದ್ದಮಟ್ಟಿಗೆ ಯುದ್ಧಮಾಡತೊಡಗಿದನು. ಆನೆಗಳು ಆನೆಗಳೊಂದಿಗೂ, ಕುದುರೆ ಸವಾರರು ಸವಾರರೊಂದಿಗೂ, ರಥಿಕರು ರಥಿಕರೊಂದಿಗೂ, ಕಾಲ್ಬಲವು ಪದಾಕಿಯೊಂದಿಗೂ, ಬಲವಾಗಿ ಹೋರಾಡುತ್ತಲಿದ್ದರು. ಯುದ್ಧಭೂಮಿಯಲ್ಲಿ ಅನೇಕ ಜನರು ಸತ್ತು ಬಿದ್ದರು. ವಿರಾಟನ ಮಗನಾದ ಉತ್ತರನು ಶಲ್ಯನೊಂದಿಗೆ ಕಾದಿ ಮೊದಲು ದಿನವೇ ಮಡಿದನು. ಮರುದಿನ ಕಳಿಂಗ ರಾಜನ ಮಕ್ಕಳಿಬ್ಬರು ಬಲವಾಗಿ ಯುದ್ಧಮಾಡಿ ಯಮಪಟ್ಟಣವನ್ನು ಸೇರಿದರು. ಇದೂ ಅಲ್ಲದೆ ಸಾಯುತ್ತಿರುವ ವೀರ ಪುರುಷರ ಲೆಕ್ಕವೇ ಸಿಕ್ಕದು. ಮತ್ತೊಂದು ಕಡೆಯಲ್ಲಿ ಭೀಷ್ಮನಿಗೂ ಅರ್ಜುನನಿಗೂ ಘೋರವಾದ ಯುದ್ಧವು ನಡೆಯಿತು. ಮೊಟ್ಟಮೊದಲು ಅರ್ಜುನನು ಅವನ ತಾತನೊಂದಿಗೆ ಮನಸಿಟ್ಟು ಯುದ್ಧಮಾಡಲಿಲ್ಲ. ಅದನ್ನು ನೋಡಿ ಶ್ರೀಕೃಷ್ಣನು ಅವನಿಗೆ ನಾಚಿಕೆ ಹುಟ್ಟಬೇಕೆಂತಲೂ, ಛಲದಿಂದ ಹೋರಾಡಬೇಕೆಂತಲೂ ಯೋಚಿಸಿ ತನ್ನ ಸುದರ್ಶನ ಚಕ್ರವನ್ನೇ ಕೈಯಲ್ಲಿ ಹಿಡಿದು ಸ್ವತಃ ಭೀಷ್ಮನ ಮೇಲೆ ಯುದ್ಧಮಾಡಲಿಕ್ಕೆ ನಡೆದನು.

ಆಗ ಅರ್ಜುನನಿಗೆ ಈರ್ಷ್ಯೆಯುಂಟಾಯಿತು. ಅವನು ಶ್ರೀಕೃಷ್ಣನನ್ನು ಹಿಂದಕ್ಕೆ ತಳ್ಳಿ ತಾನು ಮುಂದಾಳಾಗಿ ನುಗ್ಗಿದನು. ಮನಃಪೂರ್ತಿಯಾಗಿ ಭೀಷ್ಮಾಚಾರ್ಯನೊಂದಿಗೆ ಕಾದಿದನು. ವೀರಶ್ರೇಷ್ಠನಾದ ಭೀಷ್ಮನು ತಾನೊಬ್ಬನೇ ದಿನಕ್ಕೆ ಹತ್ತು ಸಾವಿರ ಮಂದಿ ವೀರರನ್ನು ಕೊಂದುಹಾಕುತ್ತಾ ಬಂದನು. ಎಂಟು ದಿನಗಳು ಕಳೆದವು. ಒಂಭತ್ತನೆಯ ದಿನ ದುರ್ಯೋಧನನು ಕರ್ಣನ ದುರುಪದೇಶದಿಂದ ಭೀಷ್ಮಾಚಾರ್ಯನನ್ನು ಯುದ್ಧಭೂಮಿಯಿಂದ ತನ್ನ ಶಿಬಿರಕ್ಕೆ ಬರಮಾಡಿಕೊಂಡನು. ಆಗ ಭೀಷ್ಮನು ದುರ್ಯೋಧನನನ್ನು ನೋಡಿ ಎಲೈ ರಾಜೇಂದ್ರನೇ ನಾನು ಈಗ ಎಂಟು ದಿನಗಳಿಂದಲೂ ನಿರ್ವಂಚನೆಯಿಂದ ಯುದ್ಧಮಾಡುತ್ತಲೇ ಬಂದಿರುವೆನು. ಇಂದು ಒಂಭತ್ತನೆಯ ದಿನ. ಈ ದಿನದಲ್ಲಿ ಆ ಪಾಂಡವರನ್ನೆಲ್ಲಾ ನಾಶಮಾಡುವೆನು. ಇಲ್ಲವಾದರೆ ನನ್ನ ಪ್ರಾಣಗಳನ್ನಾದರೂ ಬಿಡುವೆನು. ಇಂದು ನಾನಾದರೂ ಸಾಯಬೇಕು ಅಥವಾ ಪಾಂಡವರಾದರೂ ಸಾಯಲೇ ಬೇಕು ಎಂದು ಪ್ರತಿಜ್ಞೆಮಾಡಿ ಮರಳಿ ಯುದ್ಧಭೂಮಿಗೆ ಹೋದನು. ಯುದ್ಧವು ಘೋರವಾಗಿ ನಡೆಯಿತು. ಹತ್ತನೆಯ ದಿನ ಮೊದಲಂತೆಯೇ ಯುದ್ಧವು ನಡೆಯುತ್ತಿರುವಾಗ ಅರ್ಜುನನು ದ್ರುಪದರಾಯನ ಮಗನಾದ ಶಿಖಂಡಿಯನ್ನು ರಥದ ಮೇಲೆ ಇಟ್ಟುಕೊಂಡು ತಾನು ಹಿಂದೆ ಕುಳಿತು ಭೀಷ್ಮನ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಾ ಬಂದನು. ಆಗ ಭೀಷ್ಮಾಚಾರ್ಯನು ಶಸ್ತ್ರಗಳನ್ನು ನೆಲಕ್ಕೆ ಬಿಸುಟು ಬಾಣಗಳ ಹಾಸಿಗೆಯ ಮೇಲೆ ಮಲಗಿಬಿಟ್ಟನು. ಅವನು ಸ್ವೇಚ್ಛಾಮರಣಿ. ಉತ್ತರಾಯಣವು ಹುಟ್ಟುವ ತನಕ ಬದುಕಿರಬೇಕೆಂದು ಬಯಸಿದ್ದರಿಂದ ಅದುವರೆಗೂ ಅವನು ಸಾಯದೆ ಬದುಕಿಕೊಂಡು ಅಲ್ಲಿಯೇ ಇದ್ದನು.

ಭೀಷ್ಮನ ತರುವಾಯ ದ್ರೋಣಾಚಾರ್ಯನು ಕೌರವರಿಗೆ ದಳಪತಿಯಾದನು. ಅವನು ಕುರುಪತಿಯನ್ನು ನೋಡಿ ಎಲೈ ರಾಜನೇ ನಾನು ಯುಧಿಷ್ಠಿರನನ್ನು ಕಟ್ಟಿ ತಂದು ನಿನಗೆ ಒಪ್ಪಿಸುವೆನೆಂದು ಪ್ರತಿಜ್ಞೆಮಾಡಿದನು. ಆಗ ಪಾಂಡವರು ಶ್ರೀಕೃಷ್ಣನ ಅಪ್ಪಣೆಯಂತೆ ತಮ್ಮ ಸೈನ್ಯಗಳನ್ನು ತಕ್ಕ ಕಡೆಗಳಲ್ಲಿಟ್ಟು ಯುದ್ಧಕ್ಕೆ ಆರಂಭಿಸಿದರು. ಪ್ರತಿಕ್ಷಣದಲ್ಲಿಯೂ ಸಾವಿರಾರು ಸೈನಿ

ಕರ ತಲೆಗಳು ಕಡಿದು ಬೀಳುತ್ತಲಿದ್ದವು. ಅರ್ಜುನನ ಮಗನಾದ ಅಭಿಮನ್ಯುವು ಯುದ್ಧದಲ್ಲಿ ಬಹಳ ಪರಾಕ್ರಮ ತೋರಿಸಿದನೆಂದು ವೀರರೆಲ್ಲಾ ಅವನನ್ನು ಹೊಗಳುತ್ತಲಿದ್ದರು. ಮೂರನೆಯ ದಿನ ಆಚಾರ್ಯನು ಕುರುಸೈನ್ಯವನ್ನು ಚಕ್ರವ್ಯೂಹವಾಗಿ ಕಟ್ಟಿ ಯುದ್ಧಕ್ಕೆ ಆರಂಭಿಸಿದನು. ಅದರೊಳಕ್ಕೆ ನುಗ್ಗಿ ಯುದ್ಧಮಾಡಿ ಗೆದ್ದುಬರಲಿಕ್ಕೆ ಕೃಷ್ಣಾರ್ಜುನರಿಬ್ಬರಿಗೆ ಹೊರತು ಮತ್ತ್ಯಾರಿಗೂ ಸಾಮರ್ಥ್ಯವಿರಲಿಲ್ಲ. ಆ ದಿನ ಬೆಳಗ್ಗೆ ಆ ವೀರರಿಬ್ಬರು ಮತ್ತೊಂದು ಕಡೆಗೆ ಹೋಗಿ ಸಂಶಪ್ತಕರೆಂಬ ಹಗೆಗಳೊಂದಿಗೆ ಕಾದುತ್ತಿದ್ದರು. ಅವರಿಗೆ ಈ ವಿಷಯವೇ ಗೊತ್ತಿಲ್ಲ. ಅವರಿಲ್ಲವೆಂದೇ ತಿಳಿದು ದ್ರೋಣಾಚಾರ್ಯನು ಈ ಕೆಲಸವನ್ನು ಮಾಡಿದ್ದನು. ಆಗ ಪಾಂಡವರಿಗೆ ಉಪಾಯ ತೋರಲಿಲ್ಲ. ಸುಭದ್ರಾಪುತ್ರನಾದ ಅಭಿಮನ್ಯುವು ಈ ಚಕ್ರವ್ಯೂಹವನ್ನು ಭೇದಿಸಿಕೊಂಡು ಒಳಕ್ಕೆ ನುಗ್ಗುವುದನ್ನು ಮಾತ್ರ ಕಲಿತಿದ್ದನು. ಹಿಂದಕ್ಕೆ ಬರುವ ವಿಧವನ್ನು ಅವನು ಕಲಿತಿರಲಿಲ್ಲ. ಆದುದರಿಂದ ಪಾಂಡವರು ಅಭಿಮನ್ಯುವನ್ನು ಮುಂದಾಗಿ ಕಳುಹಿಸಿ ಅವನು ವ್ಯೂಹವನ್ನು ಭೇದಿಸಿಕೊಂಡು ನುಗ್ಗುವಾಗ ಅವನ ಹಿಂದೆ ಭೀಮನೂ, ಇತರ ವೀರರೂ ಹೋಗಿ ಅವನಿಗೆ ಸಹಾಯಕರಾಗಿ ಶತ್ರುಗಳನ್ನು ಜಯಿಸಿಕೊಂಡು ಬರಬೇಕೆಂದು ನಿರ್ಣಯಿಸಿದರು. ಯುಧಿಷ್ಠಿರಾಜ್ಞೆಯಂತೆ ಆ ವೀರಬಾಲನು ಚಕ್ರವ್ಯೂಹದೊಳಕ್ಕೆ ಪ್ರವೇಶಿಸಿದನು. ಅವನ ಉದ್ದೇಶದಂತೆ ಭೀಮಾದಿಗಳು ಒಳಕ್ಕೆ ನುಗ್ಗಲಾರದೆ ಹೋದರು. ಆ ವ್ಯೂಹವನ್ನು ರಕ್ಷಿಸುವುದಕ್ಕಾಗಿ ಅಗಸೇಬಾಗಲಲ್ಲಿಯೇ ದುಸ್ಸಳೆಯ ಗಂಡನಾದ ಜಯದ್ರಥನು ನಿಂತಿದ್ದನು. ಒಂದು ದಿನದ ಮಟ್ಟಿಗೆ ಪಾಂಡವರನ್ನು ಗೆಲ್ಲುವುದಕ್ಕೆ ಈಶ್ವರನಿಂದ ಅವನಿಗೆ ವರವು ಸಿಕ್ಕಿತ್ತು. ಈ ಕಾರಣದಿಂದ ಭೀಮಾದಿಗಳ ಯತ್ನ ನಡೆಯಲಿಲ್ಲ. ಅಭಿಮನ್ಯುವು ಒಳಕ್ಕೆ ಹೋದ ಕೂಡಲೇ ಮಹಾರಥರೆಲ್ಲರೂ ಅವನನ್ನು ತಡೆದು ಬಲವಾಗಿ ಕಾದಿದರು. ಆ ವೀರನ ಮುಂದೆ ಅವರ ಸಾಮರ್ಥ್ಯವು ಸ್ವಲ್ಪವೂ ಸಾಗಲಿಲ್ಲ. ಕುರುಸೈನ್ಯವು ಸೋಲುವ ಹೊತ್ತು ಬಂತು. ಕೊನೆಗೆ ಧರ್ಮಯುದ್ಧದಿಂದ ಅವನನ್ನು ಸೋಲಿಸುವುದು ಕಷ್ಟವೆಂದು ತಿಳಿಯಿತು. ಆಗ ದುರ್ಯೋಧನನ

ಕೋರಿಕೆಯಂತೆ ದ್ರೋಣನೂ, ಅಶ್ವತ್ಥಾಮನೂ, ಕೃಪನೂ, ಕರ್ಣನೂ, ಶಕುನಿಯೂ, ದುರ್ಯೋಧನನೂ, ದುಶ್ಶಾಸನನೂ, ಈ ಏಳು ಮಂದಿ ಮಹಾ ರಥಿಕರೂ ಒಟ್ಟಾಗಿ ಬಂದು ಬಿದ್ದು ಹಿಂದುಗಡೆಯಿಂದ ಬಂದು ಕೋಪದಿಂದ ಅವನ ಬಿಲ್ಲನ್ನು ಕಡಿದು ಅವನನ್ನು ಕೊಂದುಬಿಟ್ಟರು.

ಕೌರವರು ನ್ಯಾಯಮಾರ್ಗ ತಪ್ಪಿ ಅಭಿಮನ್ಯುವನ್ನು ಕೊಂದರೆಂದು ಎಲ್ಲರಿಗೂ ತಿಳಿದುಹೋಯಿತು. ಅವನ ಮರಣಕ್ಕಾಗಿ ಉಭಯಪಕ್ಷದವರೂ ಬಹಳವಾಗಿ ಚಿಂತಿಸಿದರು. ಕೃಷ್ಣಾರ್ಜುನರು ಬಂದು ನೋಡಿ ಬಹಳವಾಗಿ ದುಃಖಿಸಿದರು. ಗ್ರಹಚಾರದೋಷದಿಂದ ಸಾಯುತ್ತಲಿದ್ದ ಅಭಿಮನ್ಯುವಿನ ತಲೆಯನ್ನು ಜಯದ್ರಥನು ಕಾಲಿನಿಂದ ಒದೆದನು ಎಂಬ ಸುದ್ದಿಯು ಅರ್ಜುನನ ಕಿವಿಗೆ ಬಿತ್ತು. ಅವನು ತನ್ನ ಕೋಪವನ್ನೂ ದುಃಖವನ್ನೂ ತಡೆಯಲಾರದೆ ನಾನು ನಾಳೆ ಹೊತ್ತು ಮುಳುಗುವದರೊಳಗಾಗಿ ದ್ರೋಹಿ ಯಾದ ಆ ಜಯದ್ರಥನ ತಲೆಯನ್ನು ಕಡಿದುಬಿಡುವೆನು. ಅಥವಾ ನಾನಾ ದರೂ ಅಗ್ನಿಪ್ರವೇಶಮಾಡಿ ಮಡಿಯುವೆನು ಎಂದು ಘೋರವಾದ ಪ್ರತಿಜ್ಞೆ ಮಾಡಿದನು. ಈ ಸುದ್ದಿ ದುರ್ಯೋಧನನಿಗೆ ತಿಳಿಯಿತು. ಅವನು ಹೇಗಾ ದರೂ ಮಾಡಿ ತನ್ನ ಭಾವನನ್ನು ಕಾಪಾಡಬೇಕೆಂದು ಯೋಚಿಸಿ ಅವನನ್ನು ಒಂದು ನೆಲಮಾಳಿಗೆಯಲ್ಲಿ ಗುಟ್ಟಾಗಿ ಇರಿಸಿ ಆ ಸುದ್ದಿ ಯಾರಿಗೂ ತಿಳಿಯ ದಂತೆ ಇಟ್ಟುಕೊಂಡಿದ್ದನು. ಕೃಷ್ಣಾರ್ಜುನರು ಆ ಸೈಂಧವನನ್ನು ಹುಡುಕಿ ಕೊಂಡು ಬಂದರು. ದ್ರೋಣನೂ, ಕರ್ಣನೂ ಅವರನ್ನು ಒಳಕ್ಕೆ ಬಿಡದೆ ತಡೆದು ಕಾದಿದರು. ಎಷ್ಟು ಹೊತ್ತು ಜಗಳಮಾಡಿದರೂ ಅವರು ಅವಕಾಶ ಕೊಡಲಿಲ್ಲ. ಹೊತ್ತು ಮುಳುಗುತ್ತಾ ಬಂತು. ಅರ್ಜುನನ ಪ್ರತಿಜ್ಞೆ ನೆರ ವೇರುವಹಾಗಿಲ್ಲ; ಮುಂದೆ ಏನು ಮಾಡಬೇಕೋ ತೋರದು ಎಂದು ಚಿಂತಿ ಸುತ್ತಿರುವಾಗ ಎಲ್ಲರೂ ಯುದ್ಧವು ಇಂದಿಗೆ ಪೂರಯಿಸುವುದೆಂದು ತಿಳಿದರು. ಅಗ್ನಿಕುಂಡವು ಸಿದ್ಧವಾಯಿತು. ಆಗ ಜಯದ್ರಥನು "ಹೊತ್ತು ಮುಳುಗಿತು, ಪ್ರತಿಜ್ಞೆಯ ಗಡುವು ತೀರಿತು; ಇನ್ನು ಅರ್ಜುನನು ನನ್ನ ತಂಟೆಗೆ ಬರುವಹಾಗಿಲ್ಲ, ನನಗೆ ಮತ್ತೇನು ಭಯ" ಎಂದು ಧೈರ್ಯದಿಂದ ಹೊರಕ್ಕೆ ಬಂದನು. ಅರ್ಜುನನು

ಅವನನ್ನು ಕಂಡರೂ ಸೂರ್ಯಾಸ್ತಮಾನವಾಯಿತಲ್ಲಾ! ನಾನು ನನ್ನ ಪ್ರತಿಜ್ಞೆಯನ್ನು ನೆರವೇರಿಸಲಾರದೆಹೋದೆನಲ್ಲಾ! ಎಂದು ಚಿಂತಿಸಿ ಅಗ್ನಿಯಲ್ಲಿ ದುಮುಕುವುದಕ್ಕೆ ಸಿದ್ಧನಾಗಿದ್ದನು. ಶ್ರೀಕೃಷ್ಣನು ಮಾಡಿದ ತಂತ್ರವು ಒಬ್ಬರಿಗೂ ಗೊತ್ತಿಲ್ಲ. ಆತನು ತನ್ನ ಚಕ್ರದಿಂದ ಸೂರ್ಯನನ್ನು ಮುಚ್ಚಿಬಿಟ್ಟು ಅವನ ಗಮನವನ್ನು ತಡೆದುಬಿಟ್ಟದ್ದನು. ಆದುದರಿಂದಲೇ ಅಕಸ್ಮಾತ್ತಾಗಿ ಸೂರ್ಯನು ಕಾಣದೆಹೋದುದೂ ಕತ್ತಲೆಕವಿದುದೂ ಸಂಭವಿಸಿದವು. ಆಗ ಶ್ರೀಕೃಷ್ಣನು ಅರ್ಜುನನನ್ನು ನೋಡಿ ಅರ್ಜುನಾ ಏಕೆ ಸುಮ್ಮನೆ ನಿಂತಿರುವೆ! ಜಯದ್ರಥನ ತಲೆಯನ್ನು ಕಡಿದುಬಿಡು; ಇನ್ನೂ ಸೂರ್ಯನು ಮುಳುಗಲಿಲ್ಲ ಎಂದು ಹೇಳಿ ತನ್ನ ಚಕ್ರವನ್ನು ಹಿಂದಕ್ಕೆ ತೆಗೆದುಬಿಟ್ಟನು. ಇನ್ನೂ ಒಂದು ತಾಸು ಹೊತ್ತಿದೆ ಸಂಧ್ಯಾಕಾಲದ ಗುರುತುಗಳೊಂದೂ ಇಲ್ಲ. ಎಲ್ಲರೂ ಆಶ್ಚರ್ಯದಿಂದ ಭ್ರಾಂತಿಗೊಂಡರು. ಆಗ ಅರ್ಜುನನಿಗೆ ಧೈರ್ಯ ಬಂತು. ಕೂಡಲೇ ಅವನು ಜಯದ್ರಥನಮೇಲೆ ಬಾಣಪ್ರಯೋಗ ಮಾಡಿ ಅವನ ತಲೆಯನ್ನು ಹಾರಿಸಿ ಪ್ರತಿಜ್ಞೆಯನ್ನು ಉಳಿಸಿಕೊಂಡನು.

ಮರುದಿನ ರಾತ್ರಿ ಭಯಂಕರವಾದ ಯುದ್ಧ ಜರುಗಿತು. ಸೈನಿಕರೆಲ್ಲಾ ಹಗಲಿನಲ್ಲಿ ಕಾದಿ ಬಹಳವಾಗಿ ಬಳಲಿ ನಿದ್ರಿಸಿದ್ದರು. ಯುದ್ಧ ಮಾಡುವುದಕ್ಕೆ ರಾಕ್ಷಸರ ಹೊರತು ಮತ್ಯಾರಿಂದಲೂ ಸಾಗದೆಂದು ತಿಳಿದು ಭೀಮಸೇನನ ಮಗನಾದ ಘಟೋತ್ಕಚನನ್ನು ನೆನೆದರು. ಕೂಡಲೇ ಅವನು ಯುದ್ಧಕ್ಕೆ ಅಪ್ಪಣೆ ಪಡೆದು ಕೌರವರ ಸೈನ್ಯದ ಮೇಲೆ ಬಿದ್ದು ಅವರಲ್ಲಿ ಬಹುಮಂದಿ ವೀರರನ್ನು ಕೊಂದುಬಿಟ್ಟನು. ಕೌರವರು ಎಷ್ಟು ಸಾಹಸ ಚೇಷ್ಟೆ ಮಾಡಿದಗೂ ಅವರ ಆಟವು ಅವನ ಮುಂದೆ ನಡೆಯಲಿಲ್ಲ. ಬಳಿಕ ದುರ್ಯೋಧನನು ಕರ್ಣನನ್ನು ನೋಡಿ, "ಅಯ್ಯಾ ನಿನಗೆ ಇಂದ್ರನು ಕೊಟ್ಟ ಶಕ್ತಿಯೆಂಬ ಆಯುಧವನ್ನು ಇವನ ಮೇಲೆ ಪ್ರಯೋಗಿಸು; ಅದರಿಂದ ಇವನು ಸಾಯುವನಂತೆ!" ಎಂದು ಹೇಳಿದನು. ಆಗ ಕರ್ಣನು ಶಕ್ತಿಯನ್ನು ಜಪಿಸಿ ಘಟೋತ್ಕಚನ ಮೇಲೆ ಪ್ರಯೋಗಿಸಿದನು. ಅದರಿಂದ ಆ ವೀರನು ಮಡಿದನು. ಅವನ ಮರಣಕ್ಕಾಗಿ ಪಾಂಡವರು ದುಃಖಿಸುತ್ತಿದ್ದರು. ಆ ಶಕ್ತಿಯು

ಕರ್ಣನ ಸ್ವಾಧೀನದಲ್ಲಿದ್ದರೆ ಅದು ಅರ್ಜುನನ ತಲೆ ತೆಗೆಯದೆ ಬಿಡುತ್ತಿರಲಿಲ್ಲ. ಹೀಗಾದುದೇ ಒಳ್ಳೆಯದೆಂದು ಶ್ರೀಕೃಷ್ಣನು ತಿಳಿಯಹೇಳಿದ್ದರಿಂದ ಅವರು ಮನಸ್ಸಿಗೆ ಸಮಾಧಾನತಂದುಕೊಂಡರು.

ಬಳಿಕ ದುರ್ಯೋಧನನು ದ್ರೋಣಾಚಾರ್ಯನನ್ನು ನೋಡಿ, "ಗುರುಗಳೇ ನೀವು ಮನಸ್ಸಿಟ್ಟು ಕಾದಿ ನಮಗೆ ಜಯವನ್ನು ಸಂಪಾದಿಸಿಕೊಡಬೇಕು. ನಿಮ್ಮನ್ನೇ ನಂಬಿ ಯುದ್ಧಕ್ಕೆ ಆರಂಭಿಸಿದೆವು. ನೀವು ಕೈಬಿಡಬಾರದೆ"ಂದು ದೈನ್ಯದಿಂದ ಬೇಡಿಕೊಂಡನು. ಆಗ ದ್ರೋಣನು ಅವನನ್ನು ನೋಡಿ, "ರಾಜನೇ ನಾನು ಪಾಂಡವರನ್ನು ಕೊಂದು ನಿಮಗೆ ಜಯವನ್ನುಂಟುಮಾಡುವೆನು; ಹೆದರಬೇಡ"ವೆಂದು ಪ್ರತಿಜ್ಞೆಮಾಡಿ ಯುದ್ಧಕ್ಕೆ ಬಂದು ನಿಂತನು. ಆಗ ಶ್ರೀಕೃಷ್ಣನು ಪಾಂಡವರನ್ನುನೋಡಿ, "ಈ ಆಚಾರ್ಯನ ಕೈಯಲ್ಲಿ ಬಾಣಗಳಿರುವವರೆಗೆ ಇವನನ್ನು ಜಯಿಸಲು ಯಾರೂ ಶಕ್ತರಲ್ಲ. ಇವನು ಶಸ್ತ್ರಗಳನ್ನು ಕೈಯಿಂದ ಬಿಸುಟರೆ ಸುಲಭವಾಗಿ ಇವನನ್ನು ಕೊಂದುಹಾಕಬಹುದು. ಅದಕ್ಕೊಂದು ಉಪಾಯ ಹೇಳುವೆನು. ಅಶ್ವತ್ಥಾಮನು ಸತ್ತುಹೋದನೆಂದು ಯಾರಾದರೂ ಅವನೊಂದಿಗೆ ಹೇಳಿದರೆ ಪುತ್ರಶೋಕದಿಂದ ಬಾಣಗಳನ್ನು ಬಿಸುಡುವನು" ಎಂದು ಹೇಳಿದನು. ಆಗ ಭೀಮನು ಅಶ್ವತ್ಥಾಮನೆಂಬ ಹೆಸರುಳ್ಳ ಆನೆಯನ್ನು ಕೊಂದು ಬಲವಾದ ಧ್ವನಿಯಿಂದ, "ಯುದ್ಧದಲ್ಲಿ ಅಶ್ವತ್ಥಾಮನು ಸತ್ತನು", ಎಂದು ಗಟ್ಟಿಯಾಗಿ ಕೂಗಿಕೊಂಡನು. ಆ ಮಾತು ದ್ರೋಣನ ಕಿವಿಗೆ ಬಿತ್ತು. ಆದರೆ ಆ ಮಾತು ಅವನಿಗೆ ನಿಜವೆಂದು ತೋರಲಿಲ್ಲ. ಬಳಿಕಲಾಗುರುವು, "ಎಂದೂ ಸುಳ್ಳಾಡದೆ ಇರುವ ಯುಧಿಷ್ಠಿರನ ಬಾಯಿಂದ ಈ ಮಾತು ಹೊರಟರೆ ನಿಜವೆಂದು ನಂಬುವೆನ್ನು. ನಿನ್ನ ಮಾತಿನಲ್ಲಿ ನನಗೆ ನಂಬಿಕೆಯಿಲ್ಲ" ಎಂದನು. ಆಗ ಶ್ರೀಕೃಷ್ಣ ಮೊದಲಾದವರು ಯುಧಿಷ್ಠಿರನಿಗೆ ಹಲವು ಬಗೆಯಿಂದ ಬೋಧಿಸಿ ಅವನು ಆ ಮಾತು ಹೇಳುವ ಹಾಗೆ ಪ್ರೇರಿಸಿದರು. ಮೊದಮೊದಲು ಆತನು ಒಪ್ಪಲಿಲ್ಲ. ಕೊನೆಗೆ, "ನೀನು ಸುಳ್ಳಾಡಬೇಡ, ಅಶ್ವತ್ಥಾಮನು ಹತನಾದನು. ಆದರೆ ಮನುಷನಲ್ಲ ಒಂದು ಆನೆ ಎಂಬ ಸುದ್ದಿಯನ್ನೇ ಹೇಳು" ಎಂದನು. ಯುಧಿಷ್ಠಿರನು

ಹಾಗೆಯೇ ಆಗಲೆಂದು ಅದನ್ನೇ ಆಡಿಬಿಟ್ಟನು. ಮೊದಲಿನ ಮಾತು ಮುಗಿಯುವಷ್ಟರಲ್ಲಿ ಭೇರಿ ಮುಂತಾದ ವಾದ್ಯಗಳನ್ನು ಮೊಳಗಿಸಿದ್ದರಿಂದ ಎರಡನೆಯ ಮಾತು ದ್ರೋಣನ ಕಿವಿಗೆ ಬೀಳಲೇ ಇಲ್ಲ. ಆ ವೀರನು ತನ್ನ ಮಗನು ಸತ್ತುಹೋದನೆಂದು ನಂಬಿ ಶಸ್ತ್ರಾಸ್ತ್ರಗಳನ್ನು ಕೆಳಕ್ಕೆ ಬಿಸುಟು ಪುತ್ರ ಶೋಕದಿಂದ ಅಳಲಾರಂಭಿಸಿದನು. ಆಗ ದ್ರುಪದರಾಜನ ಮಗನಾದ ದೃಷ್ಟದ್ಯುಮ್ನನು ಎದುರಿಸಿ ಆಚಾರ್ಯರ ತಲೆಯನ್ನು ಕಡಿದುಹಾಕಿದನು. ಮೊದಲಿನ ಹತ್ತು ದಿನಗಳು ಭೀಷ್ಮಾಚಾರ್ಯನೂ ಇನ್ನು ಐದು ದಿನಗಳು ದ್ರೋಣಾಚಾರ್ಯನೂ ಯುದ್ಧ ಮಾಡಿದರು. ಉಳಿದ ವೀರರ ಯುದ್ಧವೆಲ್ಲಾ ಇನ್ನು ಮೂರು ದಿನಗಳಲ್ಲಿಯೇ ಮುಗಿದುಹೋಗುವವು.

ಸುಳ್ಳಾಡಿದ್ದರ ಫಲವು ಯುಧಿಷ್ಠಿರನಿಗೆ ಲಭಿಸದೆ ಹೋಗುವುದಿಲ್ಲ. ಸತ್ಯ ಪ್ರತಿಜ್ಞೆಯುಳ್ಳ ಆತನ ರಥವು ಆತನು ಕುಳಿತರೆ ನೆಲವನ್ನು ಸೋಕದೆ ಓಡುತ್ತಲಿತ್ತು. ನಿಜವಾಗಿದ್ದರೂ ದುರುದ್ದೇಶದಿಂದ ಈ ಒಂದು ಸುಳ್ಳು ಹೇಳಿದ ಕಾರಣ ಅವನ ರಥವು ಸಾಮಾನ್ಯವಾದ ತೇರುಗಳಂತೆ ನೆಲವನ್ನು ಬಿಟ್ಟು ಮೇಲಕ್ಕೆ ಏಳುತ್ತಿರಲಿಲ್ಲ. ಅಸತ್ಯದ ಮಹಿಮೆಯನ್ನು ನೋಡಿದಿರಾ !

---

## ಹದಿನ್ನೈದನೆಯ ಪಾಠ

ದ್ರೋಣನು ಸತ್ತ ಮೇಲೆ ಕರ್ಣನು ಸೇನಾಪತಿಯಾಗಿ ಎರಡು ದಿನಗಳು ಕಾದಿದನು. ಮೊದಲನೆಯ ದಿನ ಕರ್ಣಾರ್ಜುನರು ಒಬ್ಬರಿಗೊಬ್ಬರು ಬಹು ಕೋಪದಿಂದ ಕಾದುತ್ತಲಿದ್ದರು. ಮತ್ತೊಂದು ಕಡೆಯಲ್ಲಿ ಭೀಮನೂ ದುಶ್ಶಾಸನನೂ ಹೋರಾಡುತ್ತಲಿದ್ದರು. ಭೀಮಸೇನನು ಮೊದಲು ಮಾಡಿದ್ದ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳಲಿಕ್ಕೆ ಅದೇ ತಕ್ಕ ಸಮಯವೆಂದು ತಿಳಿದು ಅವನೊಂದಿಗೆ ಮಲ್ಲಯುದ್ಧಕ್ಕೆ ತೊಡಗಿದನು. ಬಹಳ ಹೊತ್ತು ಕಾದಿದ ಮೇಲೆ ದುಶ್ಶಾಸನನು ಬಲಹೀನನಾಗಿ ಕೆಳಕ್ಕೆ ಬಿದ್ದು ಬಿಟ್ಟನು. ಭೀಮನು ಅವನ ಎದೆಯನ್ನು

ಸೀಳಿ ಅವನ ಬಿಸಿ ರಕ್ತವನ್ನು ಕುಡಿಯುತ್ತಿದ್ದನು. ತನ್ನ ಪ್ರತಿಜ್ಞೆಯಂತೆ ದ್ರೌಪದಿಯನ್ನು ಅಲ್ಲಿಗೆ ಕರೆಯಿಸಿಕೊಂಡು ಆ ರಕ್ತವನ್ನು ಆಕೆಯ ತುರುಬಿಗೆ ಹಚ್ಚಿ ಅವನ ಹಲ್ಲುಗಳೆಂಬ ಹಣಿಗೆಯಿಂದ ಬಾಚಿ ತನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಂಡನು. ಅರ್ಜುನನು ಕರ್ಣನ ಎದುರಿಗೇನೆ ಅವನ ಮಗ ನಾದ ವೃಷಸೇನನನ್ನು ಕೊಂದುಬಿಟ್ಟನು. ಇದರಿಂದ ಕರ್ಣನಿಗೆ ಬಹು ಕೋಪ ಬಂದಿತು. ಅರ್ಜುನನನ್ನು ಕೊಂದುಬಿಡುವೆನೆಂದು ನುಗ್ಗಿದನು. ಅಷ್ಟರಲ್ಲಿಯೇ ಅವನ ರಥದ ಚಕ್ರವು ನೆಲದ ಮೇಲೆ ಸರಿಯಾಗಿ ನಡೆಯದೆ ಭೂಮಿಯಲ್ಲಿ ಹೂತುಹೋಗುತ್ತಿರುವುದೆಂದು ಯಾರೋ ಹೇಳಿದರು. ಪೂರ್ವ ದಲ್ಲಿ ಅವನಿಗೆ ನಿನ್ನ ಮರಣವು ಸಮೀಪಿಸಿದಾಗ ಹೀಗಾಗುವುದೆಂದು ಯಾರೋ ಒಬ್ಬರು ಮಹಾತ್ಮರು ಹೇಳಿದ್ದರಂತೆ. ಆ ಮಾತು ಇವನಿಗೆ ನೆನಪಿಗೆ ಬಂತು. ಆದರೂ ಅವನು ಧೈರ್ಯಕುಂದದೆ ತನ್ನ ಪ್ರಾಣಗಳ ಮೇಲೆ ಆಶೆಬಿಟ್ಟು ಬಹು ಸಾಹಸದಿಂದ ಯುದ್ಧಮಾಡಿದನು. ಮತ್ತೊಂದು ಸಂದರ್ಭದಲ್ಲಿ ಅರ್ಜುನನ ಸಂಗಡ ಆ ವೀರನು ಯುದ್ಧ ಮಾಡುತ್ತಿರುವಾಗ ಒಂದು ಸರ್ಪಾಸ್ತ್ರವನ್ನು ಕೈಗೆ ತೆಗೆದುಕೊಂಡನು. ಅರ್ಜುನನು ಖಾಂಡವ ವನದಲ್ಲಿ ಅಗ್ನಿಗೆ ಆಹಾರವನ್ನು ಕೊಟ್ಟಾಗ ಆ ಸರ್ಪವು ಅರ್ಧಾರ್ಧ ಬೆಂದು ತಪ್ಪಿಸಿಕೊಂಡು ಬಂತು. ಅದು ಅರ್ಜುನನ ತಲೆ ತೆಗೆಯುವೆನೆಂದು ಹಟಹಿಡಿದು ಅವನಿಗೆ ವೈರಿಯಾಗಿದ್ದ ಕರ್ಣನ ಬತ್ತಳಿಕೆಯಲ್ಲಿ ಬಂದು ಸೇರಿತು. ಈ ವೇಳೆಯಲ್ಲಿ ಕರ್ಣನು ಅದನ್ನು ಬಿಲ್ಲಿನಲ್ಲಿ ಹೂಡಿ ಅರ್ಜುನನ ಮೇಲೆ ಪ್ರಯೋಗಿಸಿದನು. ಅದು ಅವನ ತಲೆಯನ್ನು ತೆಗೆದುಬಿಡಬೇಕೆಂದು ಬಲು ವೇಗದಿಂದ ಬರುತ್ತಲಿತ್ತು. ಶ್ರೀಕೃಷ್ಣನು ಅದರ ಸುಳಿವನ್ನು ತಿಳಿದು ತನ್ನ ರಥವನ್ನು ನೆಲಕ್ಕೆ ಅಮುಕಿದನು. ಸರ್ಪಾಸ್ತ್ರವು ಗುರಿತಪ್ಪಿ ಅರ್ಜುನನ ತಲೆಯ ಮೇಲಿದ್ದ ಕಿರೀಟವನ್ನು ಹಾರಿಸಿಕೊಂಡು ಹೋಯಿತು. ಕೃಷ್ಣಾನು ಗ್ರಹದಿಂದ ಅರ್ಜುನನಿಗೆ ಈ ಅಪಾಯವು ತಪ್ಪಿತು. ಆ ಸರ್ಪಾಸ್ತ್ರವು ತನ್ನ ಛಲವನ್ನು ಬಿಡದೆ ಮರಳಿ ಕರ್ಣನ ಬಳಿಗೆ ಬಂದು, ‹‹ಅಯ್ಯಾ ವೀರನೇ ನೀನು ಮೊದಲಿಟ್ಟ ಗುರಿ ತಪ್ಪಿಹೋಯಿತು. ಮತ್ತೊಂದು ಸಾರಿ ನನ್ನನ್ನು

ಹೂಡಿ ಶತ್ರುವಿನ ಮೇಲೆ ಬಿಡು. ಅವನು ಯಾವ ಲೋಕಕ್ಕೇ ಹೋಗಲಿ, ಅವನ ತಲೆ ಕಡಿದುಹಾಕದೆ ಬಿಡೆನು'' ಎಂದು ಧೈರ್ಯದಿಂದ ಬೇಡಿಕೊಂಡಿತು. ಕರ್ಣನು ಸತ್ಯಪ್ರತಿಜ್ಞನು. ಒಂದುಸಾರಿ ತೊಟ್ಟ ಬಾಣವನ್ನು ಮರಳಿ ತೋಡುವುದಿಲ್ಲವೆಂದು ತನ್ನ ತಾಯಿಗೆ ಮಾತು ಕೊಟ್ಟಿದ್ದನು. ಅದನ್ನು ತಪ್ಪಲಿಕ್ಕೆ ಅವನಿಗೆ ಇಷ್ಟವಿಲ್ಲ. ಇದರಿಂದ ಎಷ್ಟು ಲಾಭಬರುವುದಾಗಿದ್ದರೂ ನಾನು ಮಾತಿಗೆ ತಪ್ಪಲಾರೆನೆಂದು ಆ ಸರ್ಪಾಸ್ತ್ರವನ್ನು ತಿರಸ್ಕರಿಸಿ ಕಳುಹಿಸಿಬಿಟ್ಟನು. ಅವನು ಪ್ರಾಣಗಳ ಮೇಲೆ ಆಸೆಬಿಟ್ಟು ಅರ್ಜುನನ ಮೇಲೆ ಯುದ್ಧಮಾಡುತ್ತಲಿದ್ದನು. ಕೊನೆಗೂ ಬದುಕಲಾಗಲಿಲ್ಲ. ಎರಡನೆಯ ದಿನ ಸಾಯಂಕಾಲ ಅವನು ತನ್ನ ಪ್ರಾಣಗಳನ್ನು ಬಿಟ್ಟು ವೀರಸ್ವರ್ಗವನ್ನು ಸೇರಿದನು. ಇದರಿಂದ ದುರ್ಯೋಧನನ ಧೈರ್ಯವು ಹಾಳಾಯಿತು. ಇನ್ನು ಕೊನೆಯ ದಿನ ಒಂದೇ ಉಳಿದಿದೆ. ಕರ್ಣನ ತರುವಾಯ ಶಲ್ಯನು ಸೇನಾಪತಿಯಾದನು. ಇವನು ಮದ್ರದೇಶದ ದೊರೆ. ವಾವೆಯಲ್ಲಿ ನಕುಲಸಹದೇವರಿಗೆ ಸೋದರಮಾವನಾಗಬೇಕು. ಇವನೂ ಮಹಾವೀರನೇ. ಏನೋ ಕಾರಣಾಂತರದಿಂದ ಕೌರವರಿಗೆ ಮಾತು ಕೊಟ್ಟು ಅವನ ಪಕ್ಷವನ್ನು ವಹಿಸಿದ್ದನು. ಈ ವೀರನಿಗೆ ಯುಧಿಷ್ಠಿರನ ಸಂಗಡ ಯುದ್ಧವಾಯಿತು. ಭೀಷ್ಮ, ದ್ರೋಣಾದಿ ವೀರರಿಗೂ ಕೂಡ ಸಾಧ್ಯವಾಗದೆ ಇದ್ದ ಈ ಯುದ್ಧದಲ್ಲಿ ನಿನಗೆ ಜಯ ಸಿಕ್ಕುವುದುಂಟೇ? ಮಧ್ಯಾಹ್ನದ ಹೊತ್ತಿಗೆ ಇವನು ಯುಧಿಷ್ಠಿರನ ಬಾಣದ ಪೆಟ್ಟಿನಿಂದ ಮಡಿದನು. ಇನ್ನು ಕೌರವರಿಗೆ ಜಯವಾಗುವುದೆಂಬ ಆಶೆಯಿಲ್ಲವೆಂದು ಎಲ್ಲರೂ ತಿಳಿದುಕೊಂಡರು. ಶಲ್ಯನು ಸತ್ತ ಒಂದೆರಡು ತಾಸುಗಳೊಳಗೆ ಸಹದೇವನು ಶಕುನಿಯನ್ನು ಕೊಂದುಬಿಟ್ಟನೆಂಬ ಸುದ್ದಿ ಹಬ್ಬಿತು. ಆಗ ದುರ್ಯೋಧನನಿಗೆ ಇದ್ದ ಸ್ವಲ್ಪ ಧೈರ್ಯವೂ ಹೋಯಿತು. ಅವನೊಬ್ಬನೇ ಉಳಿದಿರುವನು, ಸಹಾಯಕರೊಬ್ಬರೂ ಇಲ್ಲ. ಕೃಪರು, ಕೃತವರ್ಮ, ಅಶ್ವತ್ಥಾಮ ಇವರು ಮೂವರು ಹೊರತು ಮಿಕ್ಕ ಸೈನ್ಯವೆಲ್ಲಾ ಹತವಾಯಿತೆಂದು ಸಂಜಯನಿಂದ ತಿಳಿಯಿತು. ಪ್ರಾಣಭಯದಿಂದ ಅವನು ಹೋಗಿ ಒಂದು ಸರೋವರದಲ್ಲಿ ಅಡಗಿಕೊಂಡನು. ಪಾಂಡವರು ಅವನನ್ನು

ಹುಡುಕಿಕೊಂಡು ಬಂದರು. ಎಲ್ಲಿ ನೋಡಿದರೂ ಅವನ ಸುಳಿವೇ ಇಲ್ಲ. ಕೊನೆಗೆ ಸರೋವರದಲ್ಲಿ ಅಡಗಿರುವನೆಂದು ಬೇಟೆಗಾರರ ಮೂಲಕ ತಿಳಿಯಿತು. ಪಾಂಡವರು ಕೃಷ್ಣನೊಂದಿಗೆ ಹೊರಟು ಕೌರವನನ್ನು ಹುಡುಕಿಕೊಂಡು ಬಂದರು. "ನೀರಿನಿಂದ ಎದ್ದು ಬಾ" ಎಂದು ದುರ್ಯೋಧನನನ್ನು ಕರೆದರು. ಯತ್ನವಿಲ್ಲದೆ ಅವನು ಹೊರಕ್ಕೆ ಬಂದನು. ಭೀಮನಿಗೂ ದುರ್ಯೋಧನನಿಗೂ ಗದಾಯುದ್ಧವಾಯಿತು. ಒಬ್ಬರಿಗೊಬ್ಬರು ಬಹು ಕೋಪದಿಂದ ಹೋರಾಡಿದರು. ಭೀಮನು ಗದೆಯಿಂದ ಹೊಡೆದು ದುರ್ಯೋಧನನ ತೊಡೆಗಳನ್ನು ಕಡಿದುಬಿಟ್ಟನು. ಇದು ಯುದ್ಧಧರ್ಮಕ್ಕೆ ವಿರುದ್ಧವಾದುದು. ಆದರೂ ಸಭೆಯಲ್ಲಿ ದ್ರೌಪದಿಯ ಮಾನಭಂಗ ಮಾಡುವ ಸಂದರ್ಭದಲ್ಲಿ ಆ ನೀಚನು ತನ್ನ ತೊಡೆಗಳನ್ನು ತೋರಿಸಿದ್ದರಿಂದ ಭೀಮಸೇನನು ಅವುಗಳನ್ನು ಕಡಿದು ಹಾಕುವೆನೆಂದು ಪ್ರತಿಜ್ಞೆ ಮಾಡಿದ್ದನು. ಆದುದರಿಂದ ಈ ಕೆಲಸ ಮಾಡಬೇಕಾಗಿ ಬಂದಿತು.

ದುರ್ಯೋಧನನು ನೋವನ್ನು ಸಹಿಸಲಾರದೆ ಮರಣಾವಸ್ಥೆಯಲ್ಲಿ ಬಿದ್ದು ಹೊರಳಾಡುತ್ತಲಿದ್ದನು. ಆ ವೇಳೆಯಲ್ಲಿ ಅಶ್ವತ್ಥಾಮನು ಅಲ್ಲಿಗೆ ಬಂದು "ಅಯ್ಯೊ! ನೀನು ಹೆದರಬೇಡ, ನಾನು ಈ ರಾತ್ರೆಯಲ್ಲಿಯೇ ಪಾಂಡವರನ್ನೆಲ್ಲಾ ಕೊಂದುಹಾಕಿ ಬರುವೆನು" ಎಂದು ಪ್ರತಿಜ್ಞೆಮಾಡಿ ಆ ಕತ್ತಲೆಯಲ್ಲಿಯೇ ಹೊರಟನು. ಕೃಪ, ಕೃತವರ್ಮರು ಅವನ ಸಂಗಡ ಹೋಗುತ್ತಲಿದ್ದರೂ ನಿದ್ರಾಪೀಡಿತರಾಗಿ ಮಲಗಿಬಿಟ್ಟರು. ಅಶ್ವತ್ಥಾಮನು ಪಾಂಡವರ ಶಿಬಿರಕ್ಕೆ ನುಗ್ಗಿದನು. ಕೃಷ್ಣನು ಮಾಡಿದ ಉಪಾಯದಿಂದ ಪಾಂಡವರು ಆ ರಾತ್ರಿ ಬೇರೆ ಕಡೆ ಮಲಗಿದ್ದರು. ಅವರ ಮಕ್ಕಳಾದ ಪ್ರತಿವಿಂಧ್ಯಾದಿ ಐದು ಮಂದಿಯೂ ಶಿಬಿರದಲ್ಲಿ ನಿದ್ರಿಸುತ್ತಿದ್ದರು. ಅಶ್ವತ್ಥಾಮನು ಆ ಐದು ಮಂದಿ ಬಾಲಕರ ತಲೆಗಳನ್ನು ಕಡಿದು ಹಾಕಿ ನಿದ್ರಾಮತ್ತನಾದ ಧೃಷ್ಟದ್ಯುಮ್ನನನ್ನೂ ಕೊಂದು ಹಾಕಿದನು. ಅಲ್ಲಿಂದ ದುರ್ಯೋಧನನ ಬಳಿಗೆ ಹೋಗಿ ಪಾಂಡವರ ವಂಶವನ್ನೆಲ್ಲಾ ನಾಶಮಾಡಿ ಬಂದೆನೆಂದು ಹೇಳಿದನು. ಆಗ ಕುರುಪತಿಯ ಮನಸ್ಸು ನೆಮ್ಮದಿಯಾಯಿತು. ನಿಶ್ಚಿಂತೆಯಿಂದ ಅವನು ಪ್ರಾಣಗಳನ್ನು

ಬಿಟ್ಟುಬಿಟ್ಟನು. ಮರುದಿನ ಬೆಳಿಗ್ಗೆ ಪುತ್ರಶೋಕದಿಂದ ದ್ರೌಪದಿಯು ಬಹಳ ವಾಗಿ ಗೋಳಾಡಿ ಆ ಅಶ್ವತ್ಥಾಮನ ತಲೆ ತೆಗೆದುಬಿಡಬೇಕೆಂದು ಪತಿಗಳನ್ನು ಬೇಡಿಕೊಂಡಳು. ಭೀಮನು ಕೃಷ್ಣಾರ್ಜುನರನ್ನು ಕರೆದುಕೊಂಡು ಹೋಗಿ ಆ ವೀರನೊಂದಿಗೆ ಕಾದಿದನು. ಆ ಯುದ್ಧದಲ್ಲಿ ಅಶ್ವತ್ಥಾಮನು ಜೀವಿಸುತ್ತಿರಲಿಲ್ಲ. ಆದರೂ ನಾರದ, ವ್ಯಾಸ ಎಂಬ ಮಹರ್ಷಿಗಳು ಅಲ್ಲಿಗೆ ಬಂದು ಇವನು ಚಿರಜೀವಿಯಾದುದರಿಂದ ಇವನನ್ನು ಕೊಲ್ಲಬೇಡಿರಿ; ಇವನ ತಲೆಯಲ್ಲಿರುವ ಮಣಿಯನ್ನು ತೆಗೆದುಕೊಂಡು ಹೋದರೆ ಇವನು ಮೃತನಾದಂತೆಯೇ ಸರಿ, ಚಿಂತಿಸಬೇಡಿರೆಂದು ಅವರಿಗೆ ಸಮಾಧಾನ ಹೇಳಿ ಕಳುಹಿಸಿದರು. ಪಾಂಡವರು ಅದನ್ನು ತೆಗೆದುಕೊಂಡು ಬಂದು ದ್ರೌಪದಿಗೆ ಕೊಟ್ಟು ಆಕೆಯ ದುಃಖವನ್ನು ಶಮನಮಾಡಿದರು.

---

## ಹದಿನಾರನೆಯ ಪಾಠ.

ಕುರುಕ್ಷೇತ್ರ ಎಂಬುದು ಭಯಂಕರವಾದ ಯುದ್ಧಭೂಮಿ. ಈಗಲೂ ಕೂಡ ಆ ಸ್ಥಳವನ್ನು ನೋಡಿದರೆ ಸತ್ತಮನುಷ್ಯರ ಹೆಣಗಳು, ಮೃತವಾದ ಆನೆಗಳು, ಪ್ರಾಣ ಕಳೆದುಕೊಂಡ ಕುದುರೆಗಳು, ಮುರಿದುಬಿದ್ದ ರಥಗಳು ಮೊದಲಾದವುಗಳಿಂದ ಸ್ಮಶಾನ ಭೂಮಿ ಎಂದು ತೋರುತ್ತಿರುವುದು. ಕೌರವರೆಲ್ಲಾ ಸತ್ತುಹೋದರೆಂಬ ಸುದ್ದಿ ಹಸ್ತಿನಾಪಟ್ಟಣಕ್ಕೆ ಮುಟ್ಟಿತು. ಪುರನಿವಾಸಿಗಳೆಲ್ಲಾ ಬಹಳವಾಗಿ ಅತ್ತರು. ವಿಧವೆಯರಾದ ಸ್ತ್ರೀಯರು ಯುದ್ಧದಲ್ಲಿ ಮೃತರಾದ ತಮ್ಮ ಪತಿಗಳನ್ನು ನೆನೆನೆನೆದು ಅಳುತ್ತಿದ್ದರು. ಮಕ್ಕಳನ್ನು ಕಳೆದುಕೊಂಡವರು ಅವರ ಮೇಲೆ ಬಿದ್ದು ಗೋಳಾಡತೊಡಗಿದರು. ಕೆಲವು ಹುಡುಗರು ತಮ್ಮ ತಂದೆಗಳ ಹೆಣಗಳನ್ನು ನೋಡಿ ಶೋಕಿಸಿದರು. ಹೀಗೆ ರಣವೆಲ್ಲಾ ಶೋಕಮಯವಾಗಿತ್ತು. ಸಾವಿರಾರು ಮಂದಿ ಸ್ತ್ರೀಪುರುಷರು ತಮ್ಮ ಇಷ್ಟ, ಮಿತ್ರ, ಬಂಧು ಜನಗಳ ಶವಗಳನ್ನು ನೋಡಬೇಕೆಂದು ಕುರುಕ್ಷೇತ್ರಕ್ಕೆ ಬಂದರು. ಗಾಂಧಾರಿ ಧೃತರಾಷ್ಟ್ರರು ತಮ್ಮ ಪುತ್ರಶೋಕವನ್ನು ತಡೆಯಲಾರದೆ ಅವರನ್ನು ನೋಡಬೇ

ಕೆಂದು ಹೊರಟು ಬಂದರು. ಪಾಂಡವರು ಅವರನ್ನು ಸಂತೈಸುವುದಕ್ಕಾಗಿ ಅಲ್ಲಿಗೆ ಸೇರಿದರು. ದುರ್ಯೋಧನಾದಿ ಶತ ಪುತ್ರರನ್ನೂ ಭೀಮಸೇನನೇ ಕೊಂದನೆಂದು ಕೇಳಿ ಧೃತರಾಷ್ಟ್ರನಿಗೆ ಮೈಯೆಲ್ಲಾ ಬೆಂಕಿ ಬಿದ್ದಹಾಗೆ ಉರಿಯ ಲಾರಂಭಿಸಿತು. ಆದರೆ ಆ ಧೀರನು ತನ್ನ ಕೋಪವನ್ನು ಹೊರಪಡಿಸದೆ ಮನಸ್ಸಿ ನಲ್ಲಿಯೇ ನುಂಗಿಕೊಂಡು ಭೀಮನ ಅಸಾಧಾರಣವಾದ ಬಲ ಪರಾಕ್ರಮ ಗಳಿಗೆ ಸಂತೋಷಗೊಂಡವನಂತೆ ಅವನನ್ನು ಆಲಿಂಗಿಸಿಕೊಳ್ಳಬೇಕೆಂದು ಅಪೇಕ್ಷಿಸಿದನು. ಶ್ರೀಕೃಷ್ಣನು ಆತನ ಅಭಿಪ್ರಾಯವನ್ನು ತಿಳಿದು ಭೀಮ ನಿಗೆ ಬದಲಾಗಿ ಒಂದು ಕಬ್ಬಿಣದ ಬೊಂಬೆಯನ್ನು ಅಂಧರಾಜನ ಮುಂದೆ ತಂದು ನಿಲ್ಲಿಸಿದನು. ದೊರೆಯು ಹುಟ್ಟುಕುರುಡನಾದುದರಿಂದ ಆ ವಿಗ್ರಹವೇ ಭೀಮಸೇನನೆಂದು ತಿಳಿದು ಹಲ್ಲು ಕಡಿಯುತ್ತಾ ಮಹಾಬಲದಿಂದ ಅದನ್ನು ಅಪ್ಪಿಕೊಂಡನು. ಆ ವಿಗ್ರಹವು ಸಾವಿರ ತುಂಡುಗಳಾಗಿ ಒಡೆದುಹೋಯಿತು. ಆಗ ಶ್ರೀಕೃಷ್ಣನು ಧೃತರಾಷ್ಟ್ರನಿಗೆ ನಡೆದ ಸಂಗತಿಗಳನ್ನೆಲ್ಲಾ ಹೇಳಿದನು. ಆ ರಾಜನು ಇನ್ನು ಮುಂದೆ ಪಾಂಡುಕುಮಾರರನ್ನು ತನ್ನ ಮಕ್ಕಳಂತೆ ನೋಡಿ ಕೊಳ್ಳುವೆನೆಂದು ಒಡಂಬಟ್ಟನು. ಗಾಂಧಾರಿಯು ಕೂಡ ಪುತ್ರಶೋಕದಿಂದ ಬಹಳವಾಗಿ ಅತ್ತಳು. ಇಷ್ಟು ಅನರ್ಥಗಳಿಗೂ ಶ್ರೀಕೃಷ್ಣನೇ ಮೂಲವೆಂದು ನಿಶ್ಚಯಿಸಿ ಆಕೆಯು ಅವನನ್ನು ನೋಡಿ, "ಕೃಷ್ಣಾ! ನೀನೇ ನನ್ನ ವಂಶವನ್ನು ಹಾಳುಮಾಡಿದೆ. ಇದಕ್ಕೆ ಪ್ರತಿಫಲವಾಗಿ ನಿನ್ನ ವಂಶವನ್ನೂ ಕೂಡ ನೀನೇ ಹಾಳುಮಾಡಿಕೋ" ಎಂದು ಅವನಿಗೆ ಶಾಪವನ್ನು ಕೊಟ್ಟುಬಿಟ್ಟಳು.

ಯುದ್ಧದಲ್ಲಿ ಮೃತರಾದ ವೀರರಿಗೆಲ್ಲಾ ಉತ್ತರಕ್ರಿಯೆಗಳನ್ನು ನಡೆಸಿ ದರು. ಯುದ್ಧದಲ್ಲಿ ತಮಗೆ ಉಂಟಾದ ನಷ್ಟಗಳನ್ನೂ ಬಂಧು ಮಿತ್ರರ ಮರಣವನ್ನೂ ರಾಜ್ಯ ಸಂಪಾದನೆಗಾಗಿ ತಾವು ಮಾಡಿದ ಘೋರ ಕೃತ್ಯ ಗಳನ್ನೂ ಯುಧಿಷ್ಠಿರನು ನೆನೆನೆನೆದು ರಾಜ್ಯವಾಳುವುದಕ್ಕೆ ಇಷ್ಟವಿಲ್ಲದೆ ಅರ್ಜುನನಿಗೆ ಪ್ರಭುತ್ವವನ್ನು ಒಪ್ಪಿಸಿ, ತಾನು ವನವಾಸಕ್ಕೆ ಹೋಗಬೇ ಕೆಂಬ ಬುದ್ಧಿ ಹುಟ್ಟಿತು. ಆಗ ಕೃಷ್ಣನೂ ಭೀಮಾದಿ ಸಹೋದರರೂ ಇತರ ಮಹರ್ಷಿಗಳೂ ಬಂದು ಅವನಿಗೆ ಸಮಾಧಾನ ಮಾಡಿ ಪಟ್ಟಣಕ್ಕೆ ಕರೆದು

ಕೊಂಡು ಶುಭ ಲಗ್ನದಲ್ಲಿ ಪಟ್ಟಾಭಿಷೇಕ ಮಾಡಿದರು. ಅವನು ತನ್ನ ಹೆಸರಿಗೆ ತಕ್ಕಂತೆ ಧರ್ಮಮೂರ್ತಿಯೇ ಆಗಿದ್ದನು. ಆ ರಾಜನು ಹೊಸದಾಗಿ ಸೈನಿಕ ರನ್ನು ಸೇರಿಸಿ ಧರ್ಮ, ನ್ಯಾಯ, ನೀತಿ ಇವುಗಳು ತಪ್ಪದಂತೆ ಪ್ರಜೆಗಳನ್ನು ಪರಿಪಾಲಿಸುವುದಕ್ಕೆ ಪ್ರಯತ್ನಪಟ್ಟನು. ತನ್ನ ರಾಜ್ಯದಲ್ಲಿ ಪ್ರಯಾಣಿಕರಿಗೆ ಅನುಕೂಲವಾಗುವಂತೆ ಅಲ್ಲಲ್ಲಿ ಅನ್ನಸತ್ರಗಳನ್ನು ಕಟ್ಟಿಸಿದನು. ವೈದ್ಯ ಶಾಲೆಗಳನ್ನೂ ವಿದ್ಯಾಶಾಲೆಗಳನ್ನೂ ಬಹಳವಾಗಿ ಸ್ಥಾಪಿಸಿದನು. ಕೆರೆ ಕುಂಟೆಗಳನ್ನೂ ನದಿ ಕಾಲುವೆಗಳನ್ನೂ ತೋಡಿಸಿದನು. ಶಿಥಿಲವಾಗಿ ಹೋಗಿದ್ದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದ್ದಲ್ಲದೆ ಹೊಸ ದಾಗಿ ಕೆಲವು ದೇವಾಲಯಗಳನ್ನು ಕಟ್ಟಿಸಿ ಅವುಗಳಲ್ಲಿ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿಸಿದನು. ಆತನು ಇನ್ನೂ ಅನೇಕ ಧರ್ಮಕಾರ್ಯಗಳನ್ನು ಮಾಡಿಸಿ ಪ್ರಜೆಗಳಿಗೆಲ್ಲಾ ಸುಖವನ್ನುಂಟುಮಾಡಿದನು.

ಪಾಂಡವರು ಪ್ರಭುತ್ವವನ್ನು ವಹಿಸಿ ಆಳುತ್ತಿದ್ದರೂ ಅವರ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಮುಖ್ಯರಾದ ಬಂಧುಮಿತ್ರರೆಲ್ಲಾ ಯುದ್ಧದಲ್ಲಿ ಸತ್ತ ರೆಂಬ ದುಃಖವು ಮನಸ್ಸಿನಲ್ಲಿ ಬಾಧಿಸುತ್ತಿತ್ತು. ಅವರ ಅಜ್ಜನಾದ ಭೀಷ್ಮನು ಇನ್ನೂ ಮೃತನಾಗದೆ ಕುರುಕ್ಷೇತ್ರದಲ್ಲಿ ಶರತಲ್ಪದಲ್ಲಿ ಮಲಗಿ ಕಾಲನಿರೀಕ್ಷಣೆ ಮಾಡುತ್ತಲಿದ್ದನು. ಆತನ ಬಳಿಗೆ ಹೋಗಿ ರಾಜಧರ್ಮಗಳನ್ನು ತಿಳಿದುಬರೋ ಣವೆಂದು ಶ್ರೀಕೃಷ್ಣನು ಅವರಿಗೆ ಬೋಧಿಸಿದನು. ಅವರು ಅದಕ್ಕೆ ಒಪ್ಪಿ ಅವನನ್ನೂ ಸಂಗಡ ಕರೆದುಕೊಂಡು ಭೀಷ್ಮಾಚಾರ್ಯನ ಹತ್ತಿರಕ್ಕೆ ಹೋದರು. ಅಲ್ಲಿ ಆತನು ಪಾಂಡವರಿಗೆ ಹಲವು ಧರ್ಮಗಳನ್ನು ಉಪದೇಶಿಸಿದನು. ಅವುಗಳಲ್ಲಿ ಮುಖ್ಯವಾದವು ಕೆಲವನ್ನು ಹೇಳುವೆನು ಕೇಳಿರಿ.

1. ಯಾರಾದರೂ ಯುದ್ಧದಲ್ಲಿ ಎದುರಿಸಿ ನಿಂತರೆ ಅವನೊಂದಿಗೆ ತಪ್ಪದೆ ಯುದ್ಧಮಾಡಬೇಕು. ತಾನು ಗೆಲ್ಲಲಿ, ಅಥವಾ ಸೋಲಲಿ, ರಣ ಭೂಮಿಯಿಂದ ಓಡಿಹೋಗಲಾಗದು. ಇದು ಕ್ಷತ್ರಿಯ ಧರ್ಮ. ತಂದೆ ಯಾಗಲಿ, ಒಡಹುಟ್ಟಿದವರಾಗಲಿ, ಗುರುವೇ ಆಗಲಿ ಯುದ್ಧಕ್ಕೆ ಸಿದ್ಧನಾಗಿ ಇದಿರಿಗೆ ಬಂದರೆ ಅವನನ್ನು ಕೊಂದುಹಾಕಬಹುದು. ಅದು ಅವನ ಧರ್ಮ ವಾದುದರಿಂದ ಅವನಿಗೆ ಪಾಪವಿಲ್ಲ.

2. ರಾಜನು ಧರ್ಮಬುದ್ಧಿಯುಳ್ಳವನಾಗಿರಬೇಕು. ಪ್ರಜೆಗಳನ್ನೆಲ್ಲಾ ತಾನು ಮಕ್ಕಳಂತೆ ನೋಡಬೇಕು. ಅವನಿಗೆ ಯಾವ ವಿಧವಾದ ವ್ಯಸನವೂ ಇರಲಾರದು. ಅವನು ಅಲಸನಾಗಿರದೆ ತನ್ನ ಕರ್ತವ್ಯವನ್ನು ಚಟುವಟಿಕೆಯಿಂದ ಮಾಡುತ್ತಲಿರಬೇಕು. ಸತ್ಯಪ್ರಿಯನಾಗಿಯೂ ನ್ಯಾಯ ತಪ್ಪದವನಾಗಿಯೂ, ಧೈರ್ಯವಂತನಾಗಿಯೂ ಇರಬೇಕು. ಬಹು ಸೌಮ್ಯನಾಗಿ ಅಥವಾ ಬಹು ಕೋಪಿಷ್ಠನಾಗಿರಲಾಗದು. ಪ್ರಜೆಗಳನ್ನು ನೆಮ್ಮದಿಯಾಗಿ ಕಾಪಾಡುವುದರಲ್ಲಿ ತನ್ನ ಪ್ರಾಣರಕ್ಷಣೆಯಲ್ಲಿ ಕೂಡ ಲಕ್ಷ್ಯವಿಲ್ಲದವನಾಗಿರಬೇಕು. ಮತ್ತು ರಾಜನು ಗಂಭೀರಹೃದಯನಾಗಿಯೂ, ದಯಾಶಾಲಿಯಾಗಿಯೂ, ಗುರುಹಿರಿಯರಲ್ಲಿ ಭಕ್ತಿಯುಳ್ಳವನಾಗಿಯೂ ಇರಬೇಕು. ಅಂಥಾ ರಾಜನನ್ನು ಕಂಡರೆ ಪ್ರಜೆಗಳೆಲ್ಲರೂ ಅವನಲ್ಲಿ ತುಂಬಾ ಭಕ್ತಿಇಟ್ಟುಕೊಂಡು ಅವನನ್ನು ಸೇವಿಸುತ್ತಿರುವರು.

3. ಕೆಲವರು ದೈವವೇ ಮುಖ್ಯವೆಂತಲೂ ಕೆಲವರು ಪೌರುಷವೇ ಶ್ರೇಷ್ಠವೆಂತಲೂ ಹೇಳುತ್ತಿರುವರು. ನನ್ನನ್ನು ಕೇಳಿದರೆ ಪೌರುಷವೇ ದೊಡ್ಡದೆಂದು ಹೇಳುವೆನು. ಏತಕ್ಕೆಂದರೆ ಈ ಜನ್ಮದಲ್ಲಿ ನಾವು ಯಾವುದನ್ನು ಅದೃಷ್ಟವೆಂದು ಹೆಸರಿಡುವೆವೋ ಅದು ನಮ್ಮ ಪೂರ್ವಜನ್ಮದ ಉದ್ಯೋಗದ ಕರ್ಮಫಲವಷ್ಟೆ! ಹಿಂದಿನ ಜನ್ಮದಲ್ಲಿ ಒಳ್ಳೆಯದೋ ಕೆಟ್ಟದ್ದೋ ಎಂತಹ ಕೆಲಸ ಮಾಡಿದ್ದರೂ ಈ ಜನ್ಮದಲ್ಲಿ ಅದಕ್ಕೆ ತಕ್ಕ ಫಲವನ್ನು ಅನುಭವಿಸಿಯೇ ತೀರಬೇಕು. ಹಾಗೆಯೇ ನಾವು ಈ ಜನ್ಮದಲ್ಲಿ ಮಾಡಿದ್ದಕ್ಕೆಲ್ಲಾ ತಕ್ಕ ಫಲವನ್ನು ಮುಂದಿನ ಜನ್ಮದಲ್ಲಿ ಅನುಭವಿಸಿ ತೀರಬೇಕಾಗಿರುವದು. ಪುಣ್ಯಮಾಡಿದವನಿಗೆ ಸುಗತಿಯೂ ಪಾಪಿಷ್ಠನಿಗೆ ನರಕವೂ ತಪ್ಪದು. ಆದುದರಿಂದ ನಮ್ಮ ಉದ್ಯೋಗಕ್ಕೆ ತಕ್ಕ ಫಲವನ್ನೇ ನಾವು ಪಡೆಯುತ್ತಿರುವೆವೇ ಹೊರತು ಅವನ್ನು ತಪ್ಪಿಸಲಿಕ್ಕೆ ದೈವಕ್ಕೂ ಶಕ್ತಿಯಿಲ್ಲ.

4. ತಪಸ್ಸೆಂಬುದು ಶರೀರವನ್ನು ಕ್ಲೇಶಪಡಿಸತಕ್ಕದ್ದಲ್ಲ. ಅಹಿಂಸೆ, ಸತ್ಯ, ಪರೋಪಕಾರ, ದಯೆ, ಇವುಗಳೇ ನಿಜವಾದ ತಪಸ್ಸಿನ ಲಕ್ಷಣಗಳು. ವ್ರತ, ಉಪವಾಸಾದಿಗಳಿಂದ ದೇಹವು ಕ್ಷೀಣವಾಗುವುದೇ ಹೊರತು ಮತ್ಯಾವ ಲಾಭವೂ ಇಲ್ಲ.

5. ಮಕ್ಕಳು ತಮ್ಮ ತಾಯಿ, ತಂದೆ, ಗುರು ಇವರನ್ನು ಭಕ್ತಿಯಿಂದ ಪೂಜಿಸಬೇಕು. ಅವರನ್ನು ಗೌರವದಿಂದ ನೋಡಬೇಕು. ಅವರ ಆಜ್ಞೆಯನ್ನು ಮೀರಬಾರದು. ತಾಯಿತಂದೆಗಳಿಗಿಂತ ಗುರುವಿನ ಯೋಗ್ಯತೆ ದೊಡ್ಡದು. ಆತನು ಮಕ್ಕಳಿಗೆ ವಿದ್ಯಾಬುದ್ಧಿಗಳನ್ನು ಕಲಿಸಿ ಅವರು ಉನ್ನತ ಪದವಿಗೆ ಬರುವಂತೆ ಮಾಡುವ ಭಾರವನ್ನು ವಹಿಸಿಕೊಂಡಿರುವನು. ಆದುದರಿಂದ ಆತನಲ್ಲಿ ಹೆಚ್ಚಾದ ವಿಧೇಯತೆಯಿಂದಿದ್ದು ಅವನ ಆಜ್ಞೆಯನ್ನು ಮೀರದೆ ನಡೆಯುತ್ತಿರಬೇಕು. ಇದರಿಂದ ಅವರಿಗೆ ಶ್ರೇಯಸ್ಸು ಉಂಟಾಗುವುದು.

6. ದಯೆಯೇ ಧರ್ಮಮೂಲವು. ತನ್ನಂತೆಯೇ ಇತರರೂ ಇರುವರೆಂದು ಭಾವಿಸಬೇಕು. ತನ್ನಲ್ಲಿ ಇತರರು ಹೇಗೆ ವರ್ತಿಸಬೇಕೆಂದು ಅಪೇಕ್ಷಿಸುವನೋ ಹಾಗೆಯೇ ತಾನು ಇತರರನ್ನು ನೋಡಿಕೊಳ್ಳಬೇಕು. ಇದೇ ಸದಾಚಾರದ ಬೀಜವು. ಅಹಿಂಸೆಯೇ ಧರ್ಮದ ಮುಖ್ಯ ಭಾಗವು. ದೈವಭಕ್ತಿಯೇ ಧರ್ಮದ ಮೊದಲಿನ ಸೋಪಾನವು.

7. ಸಮಸ್ತ ಲೋಕಗಳನ್ನೂ ಸೃಷ್ಟಿಸಿ ರಕ್ಷಿಸುತ್ತಿರುವವನು ಪರಮೇಶ್ವರನು. ಅವನು ಆದ್ಯಂತರಹಿತನು, ಸರ್ವವ್ಯಾಪಿಯು. ಅವನಿಲ್ಲದ ವಸ್ತುವು ಒಂದಾದರೂ ಇಲ್ಲ. ಈ ಸೃಷ್ಟಿಯೆಲ್ಲಾ ಆತನ ಅಂಶವೇ. ಆದರೆ ನಿರ್ಮಲವಾದ ಕನ್ನಡಿಯು ಹೊಗೆ ತಗಲುವುದರಿಂದ ಅದರಲ್ಲಿ ಪ್ರತಿಬಿಂಬವಿದ್ದರೂ ಸ್ವಚ್ಛವಾಗಿ ಹೇಗೆ ಕಾಣಬರುವುದಿಲ್ಲವೋ ಹಾಗೆ ಹೊಗೆ ತುಂಬಿದ ನಮ್ಮ ಕಣ್ಣುಗಳಿಗೆ ದೇವರು ಗೋಚರನಾಗನು. ತನ್ನ ದುಷ್ಕೃತ್ಯಗಳಿಂದಲೂ ದುರುದ್ದೇಶಗಳಿಂದಲೂ ಮನುಷ್ಯನು ಆ ಭಗವಂತನ ಆಗ್ರಹಕ್ಕೆ ಪಾತ್ರನಾಗುತ್ತಾನೆ. ತನ್ನಲ್ಲಿರುವ ದೈವಿಕವಾದ ತೇಜಸ್ಸನ್ನು ಮಲಿನಮಾಡಿಕೊಳ್ಳುತ್ತಾನೆ. ಅವನು ಶಾಶ್ವತವಾದ ಸುಖವನ್ನು ಪಡೆಯಬೇಕಾದರೆ ಆ ಪರಮೇಶ್ವರನನ್ನು ಸರ್ವದಾ ಧ್ಯಾನಿಸುತ್ತಾ ಸನ್ಮಾರ್ಗವನ್ನು ಬಿಡದೆ ಭಕ್ತಿಯಿಂದ ಪ್ರವರ್ತಿಸತಕ್ಕದ್ದು.

ಈ ರೀತಿಯಿಂದ ಭೀಷ್ಮಾಚಾರ್ಯನು ಧರ್ಮರಾಯನಿಗೆ ರಾಜ ಧರ್ಮ, ಮೋಕ್ಷ ಧರ್ಮ ಮುಂತಾದ ಸಮಸ್ತ ಧರ್ಮಗಳನ್ನೂ ಉಪದೇಶ ಮಾಡಿದನು. ಬಳಿಕಲಾ ಮಹಾ ವೀರನು ಧೃತರಾಷ್ಟ್ರನನ್ನು ಕರೆದು ಪಾಂಡವರನ್ನು ನಿನ್ನ ಮಕ್ಕಳಂತೆ ನೋಡಿಕೊಂಡಿರೆಂದು ಬುದ್ಧಿ ಹೇಳಿ ಅವ ರನ್ನು ಆತನಿಗೊಪ್ಪಿಸಿ ತನ್ನ ಮನಸ್ಸಿನಲ್ಲಿ ಶ್ರೀಕೃಷ್ಣಪರಮಾತ್ಮನನ್ನು ಧ್ಯಾನಿಸುತ್ತಾ ಪ್ರಾಣಗಳನ್ನು ಪರಿತ್ಯಜಿಸಿದನು.

---

## ಹದಿನೇಳನೆಯ ಪಾಠ.

ಭೀಷ್ಮನು ಸತ್ತಮೇಲೆ ಧರ್ಮರಾಯನು ಅವನಿಗೆ ಅಪರಕರ್ಮ ಗಳನ್ನು ಮಾಡಿದನು. ಯುದ್ಧದಲ್ಲಿ ತನ್ನ ಮೂಲಕ ಹಲವು ಜನರು ಸತ್ತುಹೋದರಲ್ಲಾ! ನಾನು ಈ ಪಾಪವನ್ನು ಪರಿಹರಿಸಿಕೊಳ್ಳು ವುದು ಹೇಗೆ? ಎಂಬ ಚಿಂತೆಯು ಇನ್ನೂ ಅವನಿಗೆ ಬಿಟ್ಟಿರಲಿಲ್ಲ. ಆಗ ವ್ಯಾಸಋಷಿಯೂ ಶ್ರೀಕೃಷ್ಣನೂ ಅವನಿಗೆ ಹಲವು ರಾಜನೀತಿಗಳನ್ನು ಬೋಧಿಸಿದರು. ಅದರಿಂದಲೂ ಅವನ ಮನಸ್ಸು ನೆಮ್ಮದಿಗೊಳ್ಳಲಿಲ್ಲ. ಆಗ ವ್ಯಾಸನು ಅವನನ್ನು ನೋಡಿ, "ಯುಧಿಷ್ಠಿರಾ! ಅಶ್ವಮೇಧ ಯಾಗ ವನ್ನು ಮಾಡು. ನೀನು ಬಂಧುಗಳನ್ನು ಕೊಂದ ಪಾಪವು ಇದರಿಂದ ಪರಿಹಾರವಾಗುವುದೆ"ಂದು ಹೇಳಿದನು. ಆ ರಾಜನು ಅದಕ್ಕೆ ಒಪ್ಪಿ ಯಾಗಕ್ಕೆ ತಕ್ಕ ಪ್ರಯತ್ನಮಾಡಿದನು. ಪಾಂಡವರು ದ್ರವ್ಯ ಸಂಪಾ ದನೆಗೆ ಹಿಮಾಲಯ ಪರ್ವತ ಪ್ರಾಂತಕ್ಕೆ ಹೋದರು. ಅಲ್ಲಿ, ದೈವಾನು ಗ್ರಹದಿಂದ ಒಂದು ದೊಡ್ಡ ಗಣಿ ದೊರೆಯಿತು. ಅದರಲ್ಲಿ ಅವರಿಗೆ ಬೇಕಾದಷ್ಟು ಚಿನ್ನ ಸಿಕ್ಕಿತು. ಅದನ್ನು ತೆಗೆಸಿಕೊಂಡು ಪಾಂಡವರು ಅರ ಮನೆಗೆ ಬಂದರು. ಅಷ್ಟರಲ್ಲೇ ಅಭಿಮನ್ಯುವಿನ ಹೆಂಡತಿ ಉತ್ತರೆಯು ಗರ್ಭಿಣಿಯಾಗಿದ್ದು ಒಳ್ಳೆಯ ಲಗ್ನದಲ್ಲಿ ಒಂದು ಗಂಡು ಮಗು ಹೆತ್ತಳು. ಆ ಮಗು ಹುಟ್ಟುವಾಗಲೇ ಸತ್ತು ಬಿತ್ತು. ಅದನ್ನು ನೋಡಿ ಕುಂತಿ,

ಸುಭದ್ರೆ, ದ್ರೌಪದಿ ಮೊದಲಾದ ಹೆಂಗಸರೆಲ್ಲಾ ಗೋಳಾಡತೊಡಗಿದರು. ಆಗ ಶ್ರೀಕೃಷ್ಣನು ಆ ಮಗುವಿನ ಮೇಲೆ ಅನುಗ್ರಹಿಸಿ ಅದಕ್ಕೆ ಪ್ರಾಣ ದಾನ ಮಾಡಿದನು. ಅವನಿಗೆ ಪರೀಕ್ಷಿತ ಎಂಬ ಹೆಸರಿಟ್ಟು ಮುಂದೆ ಪ್ರಭುತ್ವಕ್ಕೆ ಅವನೇ ಅರ್ಹನೆಂದು ನಿರ್ಣಯಿಸಿದರು.

ಪಾಂಡವರು ಅಶ್ವಮೇಧವನ್ನು ಆರಂಭಿಸಿದರು. ಆ ಅಶ್ವಮೇಧ ಯಾಗವೆಂದರೆ ತಕ್ಕ ಲಕ್ಷಣಗಳಿಂದ ಕೂಡಿದ ಕುದುರೆಯನ್ನು ತಂದು ಅದನ್ನು ಗೊತ್ತಾದ ದಿವಸ ಪೂಜಿಸಿ ಬಿಟ್ಟುಬಿಡಬೇಕು. ಅದರ ಹಿಂದುಗಡೆ ದೊಡ್ಡ ಸೈನ್ಯವು ಹೋಗುತ್ತಿರಬೇಕು. ಅದರ ಹೆಜ್ಜೆ ಬಿದ್ದ ಕಡೆಗಳಲ್ಲೆಲ್ಲಾ ಸುವರ್ಣವನ್ನು ತುಂಬುತ್ತಿರಬೇಕು. ಶೂರರಾದ ರಾಜರು ಅದನ್ನು ಕಟ್ಟಿ ಹಾಕಿದರೆ ಅವರೊಂದಿಗೆ ಕಾದಿ ಗೆದ್ದು ಕುದುರೆಯನ್ನು ಬಿಡಿಸಿಕೊಳ್ಳಬೇಕು. ಆ ರಾಜರು ಕಾದದೆ ಶರಣಾಗತರಾದರೆ ಅವರನ್ನು ಮನ್ನಿಸಿ ಕಾಣಿಕೆ ಕಪ್ಪ ಗಳನ್ನು ತೆಗೆದುಕೊಂಡು ಅಲ್ಲಿಂದ ಮುಂದಕ್ಕೆ ಹೊರಡಬೇಕು. ಹೀಗೆ ಒಂದು ವರ್ಷಕಾಲ ಭೂಪ್ರದಕ್ಷಿಣೆ ಮಾಡಿ ಬಂದಮೇಲೆ ಆ ಕುದುರೆ ಯನ್ನು ಮಂತ್ರಪೂರ್ವಕ ವಧಿಸಿ ಅದರ ವಪೆಯನ್ನು ಯಜ್ಞೇಶ್ವರನಲ್ಲಿ ಹೋಮ ಮಾಡಿ ಋತ್ವಿಕ್ ಪುರೋಹಿತಾದಿಗಳಿಗೆಲ್ಲಾ ಯಥೋಚಿತವಾದ ದಕ್ಷಿಣೆಗಳನ್ನು ಕೊಟ್ಟು ಸತ್ಕರಿಸಬೇಕು. ಇದೇ ಯಾಗಕ್ರಮವು.

ಮೊದಲು ಕುದುರೆಯನ್ನು ಹುಡುಕಿ ತರುವುದೇ ಪ್ರಯಾಸವಾ ಯಿತು. ಬಲಶಾಲಿಯಾದ ಭೀಮಸೇನನು ತನ್ನ ಮೊಮ್ಮಗ ಮೇಘನಾದ ನನ್ನೂ ಕರ್ಣನ ಮಗನಾದ ವೃಷಕೇತುವನ್ನೂ ಕರೆದುಕೊಂಡು ಹೋಗಿ ಯಜ್ಞಾಶ್ವವನ್ನು ಸಂಪಾದಿಸಿಕೊಂಡು ಬಂದನು. ಯುಧಿಷ್ಠಿರನು ಯಜ್ಞ ಧೀಕ್ಷೆಯನ್ನು ವಹಿಸಿದನು. ಕುದುರೆಯನ್ನು ರಕ್ಷಿಸಿಕೊಂಡು ಅದರ ಹಿಂದೆ ಹೋಗುವ ಭಾರವನ್ನು ಅರ್ಜುನನು ಒಪ್ಪಿಕೊಂಡನು. ಅಶ್ವವನ್ನು ಬಿಟ್ಟು ಬಿಟ್ಟರು. ಅದು ಅನೇಕ ದೇಶಗಳನ್ನು ಸುತ್ತುತ್ತಾ ಹೋಯಿತು. ಅದು ಧರ್ಮರಾಯನ ಯಜ್ಞದ ಕುದುರೆಯೆಂದು ತಿಳಿದು ಪರರಾಯರು ಅದನ್ನು

ಪೂಜಿಸಿ ಕಾಣಿಕೆ ಕಪ್ಪಗಳೊಂದಿಗೆ ಅರ್ಜುನನಿಗೆ ಒಪ್ಪಿಸುತ್ತಾ ಬಂದರು. ಮಾರ್ಗ ಮಧ್ಯದಲ್ಲಿ ಮಣಿಪುರದಲ್ಲಿ ಅರ್ಜುನನ ಮಗನಾದ ಬಭ್ರುವಾಹನನು ರಾಜ್ಯವಾಳುತ್ತಿದ್ದನು. ಅವನಿಗೆ ಅರ್ಜುನನು ತನ್ನ ತಂದೆಯೆಂಬುದು ತಿಳಿಯದು. ಆದುದರಿಂದ ಅವನು ಕುದುರೆಯನ್ನು ಕಟ್ಟಿಹಾಕಿದನು. ತಂದೆ ಮಕ್ಕಳಿಗೆ ಘೋರವಾದ ಯುದ್ಧವು ನಡೆಯಿತು. ಅಷ್ಟರಲ್ಲಿ ಬಭ್ರುವಾಹನನು ತನ್ನ ತಾಯಿಯ ಮೂಲಕ ಇವನು ತನ್ನ ತಂದೆಯೆಂದು ಕೇಳಿ ಕುದುರೆಯನ್ನು ತಂದೊಪ್ಪಿಸಿದನು. ಇಲ್ಲಿಂದ ಮುಂದೆ ಯಾರೂ ಕುದುರೆಯನ್ನು ತಡೆಯಲಿಲ್ಲ. ಯುಧಿಷ್ಠಿರನ ಧರ್ಮಬುದ್ಧಿಯೂ ಅರ್ಜುನನ ಪರಾಕ್ರಮವೂ ಜಗತ್ಪ್ರಸಿದ್ಧವಾಗಿದ್ದವು. ಯಜ್ಞದ ಕುದುರೆಯು ಸಮಸ್ತ ದೇಶಗಳನ್ನು ತಿರುಗಿ ಮರಳಿ ಹಸ್ತಿನಾಪುರಕ್ಕೆ ಬಂದು ಸೇರಿತು. ಯಜ್ಞವು ಬಹು ಸಂಭ್ರಮದಿಂದ ನಿರ್ವಿಘ್ನವಾಗಿ ನೆರವೇರಿತು.

ಬಳಿಕ ಯುಧಿಷ್ಠಿರನು ತನ್ನ ತಮ್ಮಂದಿರ ಸಹಾಯದಿಂದ ರಾಜ್ಯಪರಿಪಾಲನೆ ಮಾಡಲಾರಂಭಿಸಿದನು. ಪ್ರಜೆಗಳೆಲ್ಲರೂ ನೆಮ್ಮದಿಯಾಗಿ ಇದ್ದರು. ಗಾಂಧಾರೀ ಧೃತರಾಷ್ಟ್ರರು ಪುತ್ರಶೋಕವನ್ನು ಮರೆಯದೆ ಅರಣ್ಯವಾಸಕ್ಕೆ ಹೊರಟು ಹೋಗಬೇಕೆಂದು ಅಪೇಕ್ಷಿಸಿದರು. ವಿದುರನೂ ಅವರ ಸಂಗಡ ಹೋಗಲಿಕ್ಕೆ ಒಪ್ಪಿದನು. ಯುಧಿಷ್ಠಿರನಿಗೆ ಈ ಸಂಗತಿ ತಿಳಿಯಿತು. ಅವನು ಅವರಿಗೆ ಎಷ್ಟೆಷ್ಟೋ ಸಮಾಧಾನ ಹೇಳಿದನು. ಅದಕ್ಕೆ ಅವರು ಒಪ್ಪಲಿಲ್ಲ. ಬಳಿಕ ಅವರನ್ನು ಅರಣ್ಯವಾಸಕ್ಕೆ ಕಳುಹಿಸಿಕೊಟ್ಟನು. ಕುಂತಿಯೂ ಅವರ ಸಂಗಡ ಹೋದಳು. ಅವರು ಕಾಡಿನಲ್ಲಿಯೇ ಕೆಲವು ಕಾಲ ಇದ್ದು ಪ್ರಾಣವನ್ನು ಬಿಟ್ಟರು.

ಯುಧಿಷ್ಠಿರನು ನ್ಯಾಯಮಾರ್ಗದಿಂದ ಮೂವತ್ತಾರು ವರ್ಷಗಳ ಕಾಲ ರಾಜ್ಯವನ್ನಾಳಿದನು. ಆ ಬಳಿಕ ಅವನಿಗೆ ಹಲವು ದುರ್ನಿಮಿತ್ತಗಳು ಕಾಣಬಂದವು. ಅತ್ತ ದ್ವಾರಕೆಯಲ್ಲಿ ದುರಾತ್ಮರಾದ ಯಾದವರು ಮದ್ಯಪಾನದ ಅಭ್ಯಾಸವನ್ನು ಹೆಚ್ಚಿಸಿಕೊಂಡು ಶ್ರೀಕೃಷ್ಣನ ದರ್ಶನಕ್ಕೆ ಬರುತ್ತಿದ್ದ

ಋಷಿಗಳನ್ನೆಲ್ಲಾ ಅವಮಾನಪಡಿಸುತ್ತಲಿದ್ದರು. ಒಂದು ದಿನ ಅವರು ಸಾಂಬನೆಂಬವನಿಗೆ ಸ್ತ್ರೀವೇಷಹಾಕಿ ಅಲ್ಲಿಗೆ ಬಂದಿದ್ದ ನಾರದನ ಹತ್ತಿರಕ್ಕೆ ಕರೆದೊಯ್ದು "ಮುನಿಗಳೇ! ಗರ್ಭವತಿಯಾದ ಈ ಸ್ತ್ರೀಯು ಎಂಥಾ ಮಗು ವನ್ನು ಹಡೆಯುವಳು ಹೇಳಿರಿ" ಎಂದು ಹಾಸ್ಯಕ್ಕಾಗಿ ಕೇಳಿದರು. ಆ ಋಷಿಗೆ ಕೋಪಬಂದಿತು. "ಇವಳ ಹೊಟ್ಟೆಯಲ್ಲಿ ಒಂದು ಕಬ್ಬಿಣದ ಒನಕೆ ಹುಟ್ಟುವುದು. ಅದು ನಿಮ್ಮ ಕುಲವನ್ನೆಲ್ಲಾ ಹಾಳುಮಾಡಿಬಿಡುವುದು", ಎಂದು ಹೇಳಿ ಹೊರಟುಹೋದನು. ಅದರಂತೆ ಸಾಂಬನ ಮೈಯಿಂದ ಒಂದು ಒನಕೆ ಹುಟ್ಟಿತು. ಅದರ ಮೂಲಕ ತಮ್ಮ ವಂಶ ಹಾಳಾಗುವುದೆಂದು ಹೆದರಿ ಅದನ್ನು ಪುಡಿಪುಡಿಯಾಗಿ ಒಡೆದು ಆ ಚೂರುಗಳನ್ನು ಸಮುದ್ರದಲ್ಲಿ ಬಿಸುಟರು. ಆದರೂ ಅದರ ಫಲವು ಅವರಿಗೆ ತಪ್ಪಲಿಲ್ಲ. ವೃಷ್ಣಿವೀರರು ಪಾನದಿಂದ ಮದಿಸಿ ಒಂದು ದಿನ ಬಲವಾಗಿ ಹೋರಾಡಿದರು. ತಮ್ಮಲ್ಲಿ ತಾವೇ ಒಬ್ಬೊಬ್ಬರನ್ನು ಕೊಂದುಕೊಳ್ಳುತ್ತಾಹೋದರು. ಶ್ರೀಕೃಷ್ಣನನ್ನು ಒಬ್ಬ ಬೇಡರವನು ಕೊಂದುಬಿಟ್ಟನು. ಬಲರಾಮನು ಯೋಗದ್ವಾರಗಳಿಂದ ಪ್ರಾಣಗಳನ್ನು ಬಿಟ್ಟನು. ಪಾಂಡವರಿಗೆ ಈ ಸುದ್ದಿ ತಿಳಿಯಿತು. ಇನ್ನು ಈ ಲೋಕದಲ್ಲಿರಬಾರದೆಂದು ನಿಶ್ಚಯಿಸಿಕೊಂಡರು.

---

## ಹದಿನೆಂಟನೆಯ ಪಾಠ

ಪಾಂಡವರು ರಾಜ್ಯಭಾರವನ್ನು ಬಿಟ್ಟುಬಿಟ್ಟು ಮರಳಿ ಅರಣ್ಯವಾಸ ಮಾಡಬೇಕೆಂದು ಹೊರಟರು. ಆಗ ಹಸ್ತಿನಾಪುರದ ಜನ ರೆಲ್ಲರೂ ಗೋಳಾಡಿ ಅವರನ್ನಗಲಿ ಇರಲಾರದೆ ಬಹುದೂರ ಅವರನ್ನು ಹಿಂಬಾಲಿಸಿಕೊಂಡುಹೋದರು. ಯುಧಿಷ್ಠಿರನು ಅವರುಗಳಿಗೆಲ್ಲಾ ಸಮಾ ಧಾನವಾದ ಮಾತುಗಳನ್ನು ಹೇಳಿ, "ನೀವು ನಿಮ್ಮ ಮನೆಗಳಿಗೆ ಹೋಗಿ ಸುಖವಾಗಿರಿ. ನಮಗೆ ಹಲವು ಬಗೆಯ ಚಿಂತೆಗಳಿಂದ ಸಂಸಾರದಲ್ಲಿ ವಿರಕ್ತಿ ಯುಂಟಾಗಿ ವನವಾಸಕ್ಕೆ ಹೋಗುತ್ತೇವೆ. ನಮ್ಮ ಹಿಂದೆ ಬಂದು ನೀವೇಕೆ ಕ್ಲೇಶಪಡಬೇಕು? ನಮ್ಮ ಮೊಮ್ಮಗ ಪರೀಕ್ಷಿದ್ರಾಯನು ಪುತ್ರರಂತೆ ನಿಮ್ಮನ್ನು

ಸಲಹುವನು. ನೀವು ಹಿಂದಿರುಗಿರಿ!'' ಎಂದು ಬಹಳವಾಗಿ ಪ್ರಾರ್ಥಿಸಿದನು. ಬಳಿಕ ಪುರಜನರು ಕಣ್ಣೀರು ಸುರಿಸುತ್ತಾ ಆ ರಾಜನ ಅಪ್ಪಣೆ ಪಡೆದು ತಮ್ಮ ಮನೆಗಳಿಗೆ ಹೊರಟು ಹೋದರು.

ಒಂದು ನಾಯಿ ಮಾತ್ರ ಅವರನ್ನು ಬೆಂಬಿಡದೆ ಹಿಂಬಾಲಿಸಿಕೊಂಡು ಹೋಯಿತು. ಪಾಂಡವರು ಅಲ್ಲಿ ಒಂದು ಮಹಾನದಿಯಲ್ಲಿ ಸ್ನಾನ ಮಾಡಿದರು. ಬಳಿಕ ಅಗ್ನಿದೇವನ ಅಪ್ಪಣೆಯಂತೆ ಅರ್ಜುನನು ಗಾಂಡೀವ ವೆಂಬ ಧನುಸ್ಸನ್ನು ಸಮುದ್ರಕ್ಕೆ ಬಿಸುಟುಬಿಟ್ಟನು. ಅಲ್ಲಿಂದ ಮುಂದೆ ಪಾಂಡವರು ಹಿಮಾಲಯ ಪರ್ವತವನ್ನು ದಾಟಹೋದರು. ಮಾರ್ಗ ದಲ್ಲಿ ದ್ರೌಪದಿಯು ಕಾಲವಾದಳು. ಆಗ ಭೀಮಸೇನನು ಯುಧಿಷ್ಠಿರ ನನ್ನು ನೋಡಿ ''ಅಣ್ಣಯ್ಯಾ! ಈ ಸಾಧ್ವಿಯು ಸಶರೀರಳಾಗಿ ಸ್ವರ್ಗಕ್ಕೆ ಹೋಗದೆ ದೇಹವನ್ನಿಲ್ಲಿಯೇ ಬಿಟ್ಟು ಹೋದಳಲ್ಲಾ! ಇದೇಕೊ'' ಎಂದು ಕೇಳಿದನು.

ಅದಕ್ಕಾತನು ''ತಮ್ಮಾ ಕೇಳು, ಈಕೆಯು ತಮ್ಮ ಪತಿಗಳೈವ ರಲ್ಲಿಯೂ ಸಮಾನ ಪ್ರೀತಿಯಿಡದೆ ಅರ್ಜುನನಲ್ಲಿ ಹೆಚ್ಚಾದ ಪ್ರೀತಿಯನ್ನು ತೋರಿಸುತ್ತಿದ್ದಳು. ಅದರಿಂದ ಇವಳು ಶರೀರದೊಂದಿಗೆ ಹೋಗಲು ಆಗ ಲಿಲ್ಲ'' ಎಂದು ಹೇಳಿದನು. ಅಲ್ಲಿಂದ ಮುಂದೆ ನಡೆದುಹೋಗುತ್ತಿರು ವಾಗ ಸಹದೇವನು ಮೃತನಾದನು. ಆಗ ಭೀಮನು ಮೊದಲಿನಂತೆಯೇ ಯುಧಿಷ್ಠಿರನನ್ನು ಕೇಳಿದನು. ಅದಕ್ಕಾತನು ''ಭೀಮಣ್ಣಾ! ಇವನು ಎಲ್ಲರಿಗಿಂತಲೂ ತಾನು ಪಂಡಿತನೆಂದು ದುರಹಂಕಾರ ಪಡುತ್ತಿದ್ದನು. ಅದಕ್ಕೆ ಇದೇ ಪ್ರತಿಫಲವಾಯಿತು'' ಎಂದು ಹೇಳಿದನು. ಇನ್ನೂ ಸ್ವಲ್ಪ ಮುಂದಕ್ಕೆ ಹೋಗಲು ನಕುಲನು ಸತ್ತುಹೋದನು. ಅದಕ್ಕೆ ಕಾರಣವೇ ನೆಂದು ಭೀಮನು ಪ್ರಶ್ನೆ ಮಾಡಿದನು. ಆಗ ಧರ್ಮರಾಯನು ''ಇವನು ತಾನೇ ಲೋಕದಲ್ಲಿ ಸೌಂದರ್ಯವಂತನೆಂತಲೂ ತನ್ನಂತಹ ಅಂದಗಾರರು ಒಬ್ಬರೂ ಇಲ್ಲವೆಂತಲೂ ಬೆಳೆಯುತ್ತಿದ್ದನು. ಅದರ ಫಲವು ಇದೇ'' ಎಂದನು. ಅಲ್ಲಿಂದ ಮುಂದೆ ಅರ್ಜುನನು ದೇಹವನ್ನು ಪರಿತ್ಯಜಿಸಿದನು.

ಆಗಲೂ ಭೀಮನು ಕಾರಣವನ್ನು ಕೇಳಿದನು. ಅದಕ್ಕಾತನು "ತವಮ್ಮಾ! ಈ ಅರ್ಜುನನು ತನ್ನ ಸಮಾನ ಶೌರ್ಯವಂತರಿಲ್ಲವೆಂದು ಗರ್ವಿಸುತ್ತಿದ್ದನು. ತನ್ನ ಶತ್ರುಗಳನ್ನೆಲ್ಲಾ ಒಂದು ದಿನ ಸಂಹರಿಸುವುದಾಗಿ ಪ್ರತಿಜ್ಞೆ ಮಾಡಿದ್ದನು. ಅದು ನೆರವೇರದೆ ಹೋಯಿತು. ಇದರಿಂದ ಅವನು ಕಲಿತ ಧನುರ್ವೇದಕ್ಕೆ ಅವಮಾನ ಸಂಭವಿಸಿತು. ಆದುದರಿಂದ ಇವನಿಗೆ ಸಶರೀರ ಸ್ವರ್ಗವು ಸಂಭವಿಸಲಿಲ್ಲ" ಎಂದನು. ಅಲ್ಲಿಂದ ಮುಂದೆ ಸ್ವಲ್ಪ ದೂರ ಹೋಗಲು ಭೀಮಸೇನನಿಗೆ ಮರಣಸಂತಾಪವುಂಟಾಯಿತು. ಅವನನ್ನು ನೋಡಿ ಯುಧಿಷ್ಠಿರನು "ಭೀಮಾ ನೀನು ಆಹಾರಪದಾರ್ಥಗಳನ್ನು ಒಬ್ಬರಿಗೂ ಕೊಡದೆ ಹೊಟ್ಟೇಬಾಕನಾಗಿ ತಿಂದುಹಾಕಿಬಿಡುತ್ತಿದ್ದೆ; ಮತ್ತು ನೀನು ಬಲಶಾಲಿಯೆಂದು ಬಲು ಅಹಂಕಾರಪಟ್ಟೆ; ಅದರ ಪರಿಣಾಮವೇ ಇದು" ಎಂದು ಹೇಳಿದನು. ಭೀಮನು ನಿರುತ್ತರನಾಗಿ ಪ್ರಾಣಗಳನ್ನು ಬಿಟ್ಟನು.

ಹೀಗೆ ಎಲ್ಲರೂ ಮೃತರಾದ ಮೇಲೆ ಯುಧಿಷ್ಠಿರನೊಬ್ಬನೇ ಉಳಿದುಕೊಂಡನು. ಅವನ ಸಂಗಡ ಬಂದ ನಾಯಿಯೂ ಹಿಂದಿರುಗಲಿಲ್ಲ. ಆಗ ದೇವೇಂದ್ರನು ರಥವನ್ನು ತೆಗೆದುಕೊಂಡು ಬಂದು "ಎಲೈ ಧರ್ಮರಾಯನೇ! ಈ ರಥವನ್ನು ಹತ್ತು; ಸ್ವರ್ಗಕ್ಕೆ ಹೋಗೋಣ" ಎಂದು ಪ್ರಾರ್ಥಿಸಿದನು. ಇದಕ್ಕಾತನು "ತ್ರಿಲೋಕಾಧಿಪತಿಯೇ! ಹೆಂಡತಿಯನ್ನೂ ತಮ್ಮಂದಿರನ್ನೂ ಬಿಟ್ಟು ಒಂಟಿಯಾಗಿ ನಾನು ಸ್ವರ್ಗಕ್ಕೆ ಬರಲೊಲ್ಲೆನು. ನನ್ನನ್ನು ಬಲವಂತ ಮಾಡಬೇಡ"ವೆಂದು ಆತನ ಪ್ರಾರ್ಥನೆಯನ್ನು ತಿರಸ್ಕರಿಸಿದನು. ಅದಕ್ಕೆ ಇಂದ್ರನು "ರಾಜೇಂದ್ರನೇ! ನಿನ್ನ ತಮ್ಮಂದಿರ ಮತ್ತು ದ್ರೌಪದಿಯ ಜೀವಗಳು ಸ್ವರ್ಗದಲ್ಲಿದ್ದುಕೊಂಡು ನಿನ್ನ ಬರುವಿಕೆಯನ್ನು ಎದುರು ನೋಡುತ್ತಲಿವೆ. ಬಾ, ಹೋಗೋಣ" ಎಂದು ಹೇಳಿದನು. ಯುಧಿಷ್ಠಿರನು ಒಪ್ಪಿ ರಥವನ್ನೇರಿದನು. ತನ್ನ ಸಂಗಡ ಬಂದ ನಾಯಿಯನ್ನೂ ರಥದಲ್ಲಿ ಹತ್ತಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸಿದನು. ಅದಕ್ಕಾತನು ಸಮ್ಮತಿಸಲಿಲ್ಲ. ಆಗ ಯುಧಿಷ್ಠಿರನು ತನ್ನ ಪುಣ್ಯದಲ್ಲಿ

ಅರ್ಧವನ್ನು ಆ ನಾಯಿಗೆ ಕೊಟ್ಟನು. ಕೂಡಲೇ ಶುನಕರೂಪದಲ್ಲಿದ್ದ ಯಮಧರ್ಮರಾಯನು ತನ್ನ ನಿಜಸ್ವರೂಪದಿಂದ ಪ್ರತ್ಯಕ್ಷನಾಗಿ ಆ ರಾಯನ ಭೂತದಯೆಯನ್ನು ಬಹಳವಾಗಿ ಹೊಗಳಿದನು. ಬಳಿಕ ಯಮನೂ, ಇಂದ್ರನೂ, ಯುಧಿಷ್ಠಿರನೂ ರಥಾರೋಹಣ ಮಾಡಿ ಸ್ವರ್ಗಲೋಕಕ್ಕೆ ಹೋದರು. ಪಾಂಡವರಲ್ಲಿ ಯುಧಿಷ್ಠಿರನೊಬ್ಬನೇ ಶರೀರ ಸಹಿತವಾಗಿ ಸ್ವರ್ಗಕ್ಕೆ ಹೋದವನು.

ಯುಧಿಷ್ಠಿರನು ಸ್ವರ್ಗಕ್ಕೆ ಹೋಗಿ ಅಲ್ಲಿ ದುರ್ಯೋಧನನು ತನ್ನ ಸ್ನೇಹಿತರೊಂದಿಗೆ ಸೌಖ್ಯವಾಗಿರುವುದನ್ನು ನೋಡಿದನು. ಅಲ್ಲಿ ಅವನ ತಮ್ಮಂದಿರಾಗಲಿ ದ್ರೌಪದಿಯಾಗಲಿ ಕಾಣಿಸಲಿಲ್ಲ. ಇದರಿಂದ ಅವನ ಮನಸ್ಸು ವ್ಯಾಕುಲಗೊಂಡಿತು. ಕಪಟ, ಕ್ರೌರ್ಯ ಮೊದಲಾದ ದುರ್ಗುಣ ಗಳಿಗೆ ನೆಲೆಮನೆಯಾಗಿದ್ದ ಪಾತಕಿಗಳಾದ ಕೌರವರು ಸ್ವರ್ಗಸುಖವ ನ್ನನುಭವಿಸುತ್ತಲಿರುವುದೂ, ಧರ್ಮಾತ್ಮರಾದ ಪಾಂಡವರು ಯಾವ ಅಕೃ ತ್ಯಕ್ಕೂ ಹೋಗದೆ ಇದ್ದರೂ ನರಕಕ್ಕೆ ಹೋದುದು ಏತಕ್ಕೆಂಬ ಸಂಶಯ ಹುಟ್ಟಿತು. ರಣದಲ್ಲಿ ಕಾದಿ ಮಡಿಯುವವರಿಗೆ ನರಕಾನುಭವವೇ ಇಲ್ಲ. ಅವರು ಮಾಡಿದ ಪಾಪಗಳೆಲ್ಲಾ ಪರಿಹಾರವಾಗಿ ಸ್ವರ್ಗಪ್ರಾಪ್ತಿಯುಂಟಾ ಗುವುದು. ಈ ಪಾಂಡವರು ಯುದ್ಧಭೂಮಿಯಲ್ಲಿ ಸಾಯದೆ ಬದುಕಿ ಕೊಂಡುದರಿಂದ ಅವರ ಪಾಪಗಳು ನಶಿಸಿರಲಿಲ್ಲ. ಅವರು ತಮ್ಮ ಕರ್ಮ ಫಲಗಳನ್ನು ನರಕದಲ್ಲಿ ಅನುಭವಿಸಿ ಸ್ವರ್ಗಕ್ಕೆ ಹೋಗಬೇಕಾಗಿಬಂತು.

ಯುಧಿಷ್ಠಿರನು ತನ್ನ ತಮ್ಮಂದಿರನ್ನು ಎಂದಿಗೆ ನೋಡುವೆನೋ? ಎಂದು ಆತುರಗೊಳ್ಳುತ್ತಿದ್ದನು. ಇವನ ಬಯಕೆಯಂತೆಯೂ ಮತ್ತು ಅಶ್ವ ತ್ಥಾಮನೆಂಬ ಆನೆ ಸತ್ತಿತೆಂದು ಎರಡರ್ಥವುಳ್ಳ ಮಾತನ್ನಾಡಿ ಹುಳ್ಳಾಡಿದು ದಕ್ಕೆ ಪ್ರತಿಫಲವಾಗಿಯೂ ಯಮದೂತರು ಬಂದು, 'ನಿನ್ನ ತಮ್ಮಂದಿರನ್ನು ತೋರಿಸುವೆವು, ಬಾರೆ'ಂದು ನರಕಕ್ಕೆ ಕರೆದೊಯ್ದರು. ಅಲ್ಲಿ ಸ್ವಲ್ಪ ಹೊತ್ತಿದ್ದು ಬಳಿಕ ಆತನು ಸ್ವರ್ಗಲೋಕಕ್ಕೆ ಬಂದನು. ಬರುವಾಗ ದಾರಿ ಯಲ್ಲಿ ತನ್ನ ತಮ್ಮಂದಿರನ್ನೂ ದ್ರೌಪದಿಯನ್ನೂ ಉಳಿದ ಬಂಧು ಜನರನ್ನೂ ಕಂಡು ಸಂತೋಷಪಟ್ಟನು.

ಇಲ್ಲಿಗೆ ಭಾರತಕಥೆಯು ಮುಗಿಯಿತು. ಇದು ಬಹು ದೊಡ್ಡ ಗ್ರಂಥ. ಹತ್ತೆಂಟು ವರುಷಗಳ ಕಾಲ ಓದಿದರೂ ಮುಗಿಯತಕ್ಕುದಲ್ಲ. ನೀವು ದೊಡ್ಡವರಾದ ಮೇಲೆ ವಿರಾಮವಾದಾಗ ಓದಿ ಕಥೆಗಳನ್ನೂ ನೀತಿಗಳನ್ನೂ ತಿಳಿದುಕೊಳ್ಳಬಹುದು. ಸದ್ಯದಲ್ಲಿ ನಮ್ಮ ಪುರಾಣ, ಇತಿಹಾಸಗಳಲ್ಲಿ ನಿಮಗೆ ಆದರ ಹುಟ್ಟುವುದಕ್ಕಾಗಿ ಸಂಕ್ಷೇಪವಾಗಿ ಕಥೆಯನ್ನು ಹೇಳಿದ್ದೇನೆ. ಭಾರತದಲ್ಲಿ ಬಂದಿರುವ ಪ್ರಸಿದ್ಧ ವೀರರ ಗುಣದೋಷಗಳನ್ನು ಮುಂದೆ ತಿಳಿಸುವೆನು. ಅವುಗಳನ್ನು ಓದಿ ಗುಣವಂತರ ಸುಗುಣಗಳನ್ನು ಅನುಸರಿಸಿರಿ. ದೋಷಗಳನ್ನು ದೂರಗೊಳಿಸಿರಿ. ದೇವರು ನಿಮಗೆ ಶ್ರೇಯಸ್ಸನ್ನು ಉಂಟುಮಾಡಲಿ. ಜಗದ್ರಕ್ಷಕನಾದ ಶ್ರೀಕೃಷ್ಣ ಪರಮಾತ್ಮನ ಅನುಗ್ರಹಕ್ಕೆ ಎಲ್ಲರೂ ಪಾತ್ರರಾಗೋಣ. ಒಂದು ಸಾರಿ 'ಜಯ ಜಯ ಕೃಷ್ಣ ಕೃಷ್ಣ' ಎಂದು ಭಜಿಸಿರಿ.

---

## ನೀತಿಬೋಧೆ.

ಮಕ್ಕಳಿರಾ! ಇದುವರೆಗೆ ಓದಿದ ಪಾಠಗಳಿಂದ ನಿಮಗೆ ಭಾರತ ಕಥೆಯು ಸ್ವಲ್ಪಮಟ್ಟಿಗೆ ತಿಳಿದುಬಂದಿರಬಹುದು. ಈ ಚರಿತ್ರೆಯು ನಮಗೆ ನೀತಿಬೋಧಕವಾಗಿಯೂ ಕಿವಿಗೆ ಇಂಪಾಗಿಯೂ ಸಂತೋಷಗೊಳಿಸತಕ್ಕುದಾಗಿಯೂ ಇರುವುದು. ಇದರಿಂದ ನೀವು ಕಲಿಯಬಹುದಾದ ನೀತಿಗಳು ಅನೇಕವಾಗಿರುವುವು. ನೀವು ಅವುಗಳನ್ನು ಅನುಸರಿಸಿ ನಡೆದರೆ ಎಲ್ಲಿಯಾದರೂ ಭಯವಿಲ್ಲದೆ ಇರಬಹುದು.

ಭಾರತದಲ್ಲಿ ಯುಧಿಷ್ಠಿರನೂ-ದುರ್ಯೋಧನನೂ, ವಿದುರನೂ-ಶಕುನಿಯೂ, ಭೀಮನೂ-ದುಶ್ಶಾಸನನೂ, ಅರ್ಜುನನೂ-ಕರ್ಣನೂ ಸರಿಸಮಾನರಾಗಿ ತೋರುವರು. ಆದರೆ ಇವರ ಗುಣಗಳು ಮಾತ್ರ ಪರಸ್ಪರ ವಿರೋಧವುಳ್ಳವುಗಳೆಂದು ನೀವೇ ತಿಳಿದುಕೊಂಡಿರುವಿರಿ. ಇವರಲ್ಲಿರುವ ಸುಗುಣಗಳೆಲ್ಲಾ ನೀವು ಅಭ್ಯಾಸಮಾಡಲು ತಕ್ಕವುಗಳಾಗಿವೆ. ಆ ಮೇಲೆ ಭೀಷ್ಮನ ಮತ್ತು ಶ್ರೀಕೃಷ್ಣನ ಚರಿತ್ರೆಗಳು ಪರಿಶುದ್ಧವಾಗಿಯೂ ಆಶ್ಚರ್ಯ

ಕರವಾಗಿಯೂ ಇವೆ. ಇವರ ನಡತೆಗಳನ್ನು ಅನುಸರಿಸುವುದು ಹಿತಕರವಾದುದು. ಮುಂದೆ ಪ್ರತಿ ಒಬ್ಬರ ಕಥೆಯನ್ನೂ ಸಂಕ್ಷೇಪವಾಗಿ ಹೇಳುವೆನು. ಅವುಗಳಲ್ಲಿ ಉತ್ತಮವಾದುದು ಇಂಥದ್ದೆಂದು ಊಹಿಸಿ ತಿಳಿದುಕೊಳ್ಳುವ ಭಾರವನ್ನು ನಿಮ್ಮ ಮೇಲೆಯೇ ಹಾಕಿ ಸುಮ್ಮನಾಗುವೆನು.

ಜೈ ಜೈ ಸೀತಾರಾಮ್ ।
ಜೈ ಜೈ ಭಾರತಮಾತಾ–ವಂದೇ ಮಾತರಮ್ ॥
ಗಾಂಧಿ ಮಹಾತ್ಮಕಿ ಜೈ ।
ಜಯ ಶ್ರೀಕೃಷ್ಣ ಮಹಾರಾಜಾ ॥



# ಭಾರತ ವೀರರ ಕಥೆಗಳು



ಮಕ್ಕಳಿರಾ! ಭಾರತ ಕಥೆಯನ್ನು ಸಂಕ್ಷೇಪವಾಗಿ ಓದಿರುವಿರಿ. ಇದರಲ್ಲಿ ಬರುವ ಮುಖ್ಯವಾದ ಕೆಲವು ವೀರರ ಸದ್ಗುಣಗಳನ್ನು ನೀವು ಅವಲಂಬಿಸಬೇಕು. ದುರ್ಗುಣಗಳನ್ನು ಬಿಟ್ಟುಬಿಡಬೇಕು. ನಿಮ್ಮ ಜ್ಞಾಪಕದಲ್ಲಿ ಇಟ್ಟುಕೊಳ್ಳಲು ಅಂಥವರ ಮುಖ್ಯ ಗುಣಗಳನ್ನು ಇಲ್ಲಿ ತಿಳಿಸುವೆವು. ಕೈಯಲ್ಲಾದ ಮಟ್ಟಿಗೆ ಇವುಗಳನ್ನು ಆಚರಣೆಯಲ್ಲಿ ತರುವಿರಾ?

## ೧. ಭೀಷ್ಮನ ಇಂದ್ರಿಯನಿಗ್ರಹ

ಭಾರತವೀರನೆಂದರೆ ಭೀಷ್ಮನೊಬ್ಬನೇ. ಇವನಂತೆ ಸತ್ಯಸಂಕಲ್ಪನೂ ದೃಢಚಿತ್ತನೂ, ದೈವಭಕ್ತನೂ, ಸ್ವಾರ್ಥತ್ಯಾಗಿಯೂ ಮತ್ತಾರೂ ಸಿಕ್ಕರು. ತಂದೆಯ ಇಷ್ಟವನ್ನು ಸಲ್ಲಿಸಲಿಕ್ಕಾಗಿ ಯಾವಜ್ಜೀವವೂ ಮದುವೆಮಾಡಿಕೊಳ್ಳಲೊಲ್ಲೆನೆಂದು ಪ್ರತಿಜ್ಞೆಮಾಡಿದವನು. ಅದರಂತೆ ಲೋಕದ ಹೆಂಗಸರೆಲ್ಲಾ ತಾಯಿಯರೆಂದು ತಿಳಿದು ಗುರುಮುಂತಾದವರು ಎಷ್ಟು ಬಲವಂತಮಾಡಿದರೂ ತನ್ನ ನಿಯಮವನ್ನು ಬಿಡಲಿಲ್ಲ. ಅಂಬೆಯೆಂಬ ರಾಜಕುಮಾರಿಯು ಇವನ ವಿದ್ಯಾಗುರುವಾದ ಪರಶುರಾಮನ ಬಳಿಗೆ ಹೋಗಿ ಬೇಡಿದಳು. ಅವನು ಭೀಷ್ಮನನ್ನು ಕರೆಸಿ ಇವಳನ್ನು ಮದುವೆಯಾಗೆಂದು ಹೇಳಿದನು. ವ್ರತಭಂಗಕ್ಕೆ ಇವನು ಒಪ್ಪಲಿಲ್ಲ. ಇಬ್ಬರಿಗೂ ದೊಡ್ಡ ಯುದ್ಧನಡೆದು ಗುರುವೇ ಸೋತನು. ಮತ್ತೊಂದು ವೇಳೆ ಇವನ ತಾಯಿಯೇ ತನ್ನ ಅಪ್ಪಣೆ ಹಿಂದೆಗೆದಳು. 'ನೀನು ತಮ್ಮಂದಿರ ಹೆಂಡಿರನ್ನು ಕೈಹಿಡಿ' ಎಂದು ಹೇಳಿದಳು. ಅದಕ್ಕೂ ಸಮ್ಮತಿಪಡಲಿಲ್ಲ. ಭಾರತಯುದ್ಧದ ಹದಿನೆಂಟುದಿನಗಳಲ್ಲಿ ಹತ್ತುದಿನಗಳಕಾಲ ಇವನೊಬ್ಬನೇ ಕಾದಿ ಜಯವನ್ನು ಪಡೆದನು. ಧರ್ಮದ ಕಡೆಗೇನೇ ಇವನ ದೃಷ್ಟಿ ಇದ್ದುದರಿಂದ ಪಾಂಡವರಿಗೆ ಸಹಾಯವಾಗುವಂತೆಯೂ, ಸ್ತ್ರೀಯಾಗಿದ್ದು ಈಚೆಗೆ ಗಂಡಸಾದ ಶಿಖಂಡಿಯು ಎದುರಿಗೆ ಬಂದು ನಿಂತರೆ ಯುದ್ಧ ಮಾಡದೆ ಆಯುಧ ಬಿಸುಡುವಂತೆಯೂ ಹೇಳಿ ತನ್ನ

ಪ್ರತಿಜ್ಞೆ ಕಾಪಾಡಿಕೊಂಡನು. ಯುದ್ಧದಲ್ಲಿ ಶಸ್ತ್ರಹಿಡಿದು ಕಾದುವುದಿಲ್ಲ ವೆಂದು ಪ್ರತಿಜ್ಞೆಮಾಡಿದ್ದ ಶ್ರೀಕೃಷ್ಣನು ಸುದಾ ಭೀಷ್ಮನ ಪ್ರತಾಪಕ್ಕೆ ಕೋಪ ಗೊಂಡು ಇವನನ್ನು ಕೊಂದುಬಿಡುವೆನೆಂದು ಕೈಗೆ ಚಕ್ರವನ್ನು ತೆಗೆದು ಕೊಂಡನು. ಆಗ ಈ ಭಕ್ತನು 'ಸ್ವಾಮಿ! ನಿನ್ನ ಕೈಯಿಂದ ಮಡಿದರೆ ಕೂಡಲೇ ನನಗೆ ಕೈವಲ್ಯ ಲಭಿಸುವುದು. ದಯಮಾಡಿ ನನ್ನನ್ನು ಸಂಹರಿಸು' ಎಂದು ವಿನಯದಿಂದ ಪ್ರಾರ್ಥಿಸಿದನು. ಶ್ರೀಕೃಷ್ಣನೇ ನಾಚಿಕೊಂಡು ಸುಮ್ಮ ನಾದನು. ದೂರದೃಷ್ಟಿಯುಳ್ಳ ಈತನು ಪರೋಪಕಾರವೇ ಮುಖ್ಯವೆಂದು ತಿಳಿದಿದ್ದನು. ಇದರಿಂದಲೇ ಇವನಿಗೆ ಸ್ವೇಚ್ಛಾಮರಣದ (ತನಗೆ ಮನಸ್ಸು ಬಂದಾಗ ಪ್ರಾಣತ್ಯಾಗ ಮಾಡುವುದು) ಶಕ್ತಿ ಉಂಟಾಯಿತು. ಇವನು ಪ್ರತಿಫಲಾಪೇಕ್ಷೆಯಿಲ್ಲದೆ ಯಾವ ಕೆಲಸವನ್ನಾದರೂ ಮಾಡುತ್ತಿದ್ದನು. ನಿಜ ಹೇಳುವುದು, ಆಡಿದ ಮಾತು ತಪ್ಪದೆ ನಡೆಸುವುದು. ದೇವರಲ್ಲಿ ನಿಜ ವಾದ ಭಕ್ತಿ, ಪರೋಪಕಾರ, ಅಧರ್ಮಕ್ಕೆ ಬೀಳದೆ ನ್ಯಾಯಮಾರ್ಗವನ್ನನು ಸರಿಸುವುದು, ಇದರಿಂದ ಈ ಗುಣಗಳನ್ನು ಕಲಿಯಿರಿ.

## ೨. ಅರ್ಜುನನ ಗುರುಭಕ್ತಿ ಮತ್ತು ದೈವಭಕ್ತಿ

ಮಹಾಭಾರತದಲ್ಲಿ ಪಾಂಡವರಲ್ಲಿ ಹಿರಿಯನಾದ ಯುಧಿಷ್ಠಿರನೇ ರಾಜನಾದನೆಂದು ಹೇಳಿದ್ದರೂ ಜೈನರ ಮತ ಗ್ರಂಥಗಳಲ್ಲಿ ವೀರಶ್ರೇಷ್ಠನಾದ ಅರ್ಜುನನನ್ನೇ ಕಥಾನಾಯಕನನ್ನಾಗಿ ಹೇಳಿರುವರು. ಪೂರ್ವಕಾಲದ ವೀರರಲ್ಲಿ ಇವನಂಥ ಸಮರ್ಥರು ಒಬ್ಬರೂ ಇರಲಿಲ್ಲ. ಅಸಹಾಯನಾದ ಇವನೊಬ್ಬನೇ ಉತ್ತರ ಗೋಗ್ರಹಣದಲ್ಲಿ ಪ್ರಬಲರಾದ ಭೀಷ್ಮದ್ರೋಣಾದಿ ವೀರರನ್ನೆಲ್ಲಾ ಓಡಿಸಿ ಶತ್ರುಸೈನ್ಯವನ್ನೆಲ್ಲಾ ಲಯಮಾಡಿದನು. ಇವನ ಸಹಾಯವಿಲ್ಲದೆ ಇದ್ದರೆ ಉಳಿದ ಪಾಂಡವರು ಎಂದೋ ಕರ್ಣನಿಂದ ಹತರಾಗಿ ಹೆಸರಳಿದು ಹೋಗುತ್ತಿದ್ದರು. ಕಾಲಕೇಯ, ನಿವಾತಕವಚರನ್ನು ಎದುರಿ ಸಲು ಮತ್ತಾರೂ ಶಕ್ತರಾಗಿರಲಿಲ್ಲ. ತನ್ನ ಗುರುವಾದ ದ್ರೋಣನಿಗೆ ಅಚ್ಚು ಮೆಚ್ಚಾದ ಶಿಷ್ಯನಾಗಿದ್ದು ಅವನ ಆಜ್ಞೆಯನ್ನು ಗೆರೆಮೀರದೆ ನಡೆದುಕೊಳ್ಳು ತ್ತಿದ್ದನು. ಅವನ ಮೇಲೆ ಯುದ್ಧಕ್ಕೆ ನಿಂತಾಗಲೂ ಎರಡು ಪಾದಗಳಿಗೆ

ಎರಡು ಬಾಣಗಳನ್ನು ಸಮರ್ಪಿಸಿ ಆಶೀರ್ವಾದ ಪಡೆದು, ಕಾದಲಿಕ್ಕೆ ತೊಡ ಗುವನು. ಗುರುವಿನ ಪ್ರತಿಜ್ಞೆಯನ್ನು ಶಿಷ್ಯರೊಬ್ಬರೂ ನೆರವೇರಿಸಲಾರದೆ ಹೋದಾಗ ತಾನೊಬ್ಬನೇ ಹೋಗಿ ಮಲಗಿದ್ದ ಪಾಂಚಾಲರಾಜನನ್ನು ಮಂಚ ದೊಂದಿಗೆ ಹಿಡಿದುತಂದು ಆತನ ಪಾದದ ಮೇಲೆ ಕೆಡಹಿ ಪ್ರತಿಜ್ಞೆಯನ್ನು ಪಾಲಿಸಿದನು. ತಾಯಿಯ ಐರಾವತವ್ರತ ನೆರವೇರಿಸಲು ಸ್ವರ್ಗದಿಂದ ಆನೆಯನ್ನು ತರಿಸಿಕೊಟ್ಟನು. ಪರಮೇಶ್ವರನೊಂದಿಗೆ ಕಾದಿ ಶಕ್ತಿಸಾಹಸ ಗಳನ್ನು ತೋರಿದನು. ಗಯನೆಂಬ ಗಂಧರ್ವನನ್ನು ರಕ್ಷಿಸುವುದಾಗಿ ಅಭಯು ಕೊಟ್ಟು ಪರಮಮಿತ್ರನಾದ ಶ್ರೀಕೃಷ್ಣನೊಂದಿಗೆ ವೈರವನ್ನೂ ಕಟ್ಟಿಕೊಂಡು ಕಾದಿ ಜಯಿಸಿದನು. ಸಾಯಂಕಾಲದೊಳಗಾಗಿ ಸೈಂಧವನನ್ನು ಕೊಲ್ಲುವೆ ನೆಂದು ಪ್ರತಿಜ್ಞೆಮಾಡಿ ಅದನ್ನು ನೆರವೇರಿಸಿದನು. ಅಭೇದ್ಯವಾಗಿದ್ದ ಮತ್ಸ್ಯ ಯಂತ್ರವನ್ನು ಭೇದಿಸಿ ಪಾಂಚಾಲರಾಯನ ಮಗಳನ್ನು ಕೈಹಿಡಿದನು. ಖಾಂಡವವನವನ್ನು ಅಗ್ನಿಗೆ ಆಹುತಿಯಾಗಿ ಕೊಟ್ಟು ಇಂದ್ರನ ಗರ್ವ ಭಂಗಮಾಡಿದನು. ಸಾಧಾರಣವಾಗಿ ಯಾವ ಯುದ್ಧದಲ್ಲಿಯೂ, ಇವನು ಸೋತವನೇ ಅಲ್ಲ. ಶ್ರೀಕೃಷ್ಣನಿಗೆ ಇವನು ಅತ್ತೆಯ ಮಗನಾಗಿ ಬಹು ಸಲಿಗೆಯಿಂದ ಇದ್ದರೂ ಇವನಿಗೆ ದೈವಭಕ್ತಿ ಹೆಚ್ಚಾಗಿತ್ತು. ಅವನ ಮಾತು ಮೀರುತ್ತಿರಲಿಲ್ಲ. ಸ್ವರ್ಗದಲ್ಲಿ ಇವನು ಕೆಲವುಕಾಲವಿದ್ದಾಗ ಇಂದ್ರನ ಆಜ್ಞೆಯಂತೆ ಊರ್ವಶಿಯು ಈತನನ್ನು ಮೋಹಿಸಿದಳು. ತಾನಾಗಿ ಒಲಿದು ಬಂದರೂ ಅವಳು ವಾವೆಯಲ್ಲಿ ತಾಯಿಯೆಂದು ತಿಳಿದು ಆಕೆಯನ್ನೊಲ್ಲದೆ ತಿರಸ್ಕರಿಸಿ ಅವಳು ಕೊಟ್ಟ ಶಾಪದಂತೆ ನಪುಂಸಕ ರೂಪದ ಫಲವನ್ನು ಅನುಭವಿಸಿದನು. ಶ್ರೀಕೃಷ್ಣನು ಧರ್ಮವನ್ನು ತಪ್ಪಿ ಭೀಷ್ಮನ ಮೇಲೆ ಕೈಮಾಡಲಿಕ್ಕೆ ಹೊರಟಾಗ ಆತನಿಗೆ ಪ್ರತಿಜ್ಞೆಯನ್ನು ಜ್ಞಾಪಕ ಕೊಟ್ಟು ಕಾದದ ಹಾಗೆ ತಡೆದನು. ಗುರಿಯಿಟ್ಟು ಬಾಣಪ್ರಯೋಗಮಾಡುವದ ರಲ್ಲಿ ಇವನ ಸಮಾನರೇ ಇಲ್ಲ. ತಾನೇ ಸಮರ್ಥನೆಂಬ ಗರ್ವ ಒಂದು. ಇಲ್ಲದಿದ್ದರೆ ಇವನಂತಹ ಗುಣವಂತನೇ ಇಲ್ಲವೆನ್ನಬಹುದು. ದೈವದಲ್ಲಿ ವಿಶ್ವಾಸ, ಒಡಹುಟ್ಟಿದವರಲ್ಲಿ ಪ್ರೀತಿ, ಸದಾಚಾರ, ಧರ್ಮಯುದ್ಧದಲ್ಲಿ

ಅಭಿಮಾನ, ಧೈರ್ಯ, ದೃಢನಿಶ್ಚಯ ಈ ಗುಣಗಳನ್ನು ನೀವು ಕಲಿಯಲಿಕ್ಕೆ ಇವನ ಮೇಲ್ಪಙ್ಕ್ತಿ ಇಟ್ಟುಕೊಳ್ಳಬಹುದು.

## ೩. ಅಭಿಮನ್ಯು.

ಇವನು ಅರ್ಜುನನ ಮಗನು. ಅವನಿಗಿಂತಲೂ ಶೂರನು. ಶಕ್ತರಾಗಿಯೂ ಗುಣವಂತರಾಗಿಯೂ ಇದ್ದ ತಾಯಿ ತಂದೆಗಳಿಂದ ಹುಟ್ಟಿದವನಾದ್ದರಿಂದ ಒಳ್ಳೆಯ ಬಲಶಾಲಿಯಾಗಿದ್ದನು. ಭಾರತಯುದ್ಧದಲ್ಲಿ ಇವನು ತೋರಿದ ಸಾಹಸವನ್ನು ಮತ್ತಾರೂ ಮಾಡರು. ದ್ರೋಣಾಚಾರ್ಯನು ಕಟ್ಟಿದ್ದ ಚಕ್ರವ್ಯೂಹವನ್ನು ಭೇಧಿಸಲು ಪಾಂಡವ ಸೇನೆಯಲ್ಲಿ ಅರ್ಜುನನ ಹೊರತು ಮತ್ತಾರೂ ಶಕ್ತರಿರಲಿಲ್ಲ. ಅವನು ಬೇರೆ ಯುದ್ಧಕ್ಕೆ ಹೋಗಿದ್ದನು. ಈ ವೀರಬಾಲನು ಇನ್ನೂ ಚಿಕ್ಕವನಾಗಿದ್ದರೂ ಹೆದರದೆ ಧೈರ್ಯಗೊಂಡು ತಾನು ಹೋಗಿ ಗೆದ್ದುಬರುವೆನೆಂದು ಯುಧಿಷ್ಠಿರನ ಅಪ್ಪಣೆ ಪಡೆದು ಹೊರಟನು. ರಥದಲ್ಲಿ ಒಂದು ಬಿಲ್ಲೂ ಕೆಲವು ಬಾಣಗಳೂ ಮಾತ್ರ ಇದ್ದುವು. ಮತ್ತೊಂದು ಬಿಲ್ಲಿರುವುದು ಲೇಸೆಂದು ಸಾರಥಿ ಹೇಳಲು "ಛೀ, ಛೀ ಹೇಡಿ! ನನ್ನ ಬಿಲ್ಲನ್ನು ಮುರಿಯುವವರಾರು? ಬಾಯಿ ಮುಚ್ಚು" ಎಂದು ಗದರಿಸಿದನಂತೆ! ಶೂರನಾದ ಇವನು ವ್ಯೂಹದೊಳಗೆ ನುಗ್ಗಿ ಶತ್ರುಗಳನ್ನು ನುಗ್ಗುನುರಿಮಾಡಿಬಿಟ್ಟಾಗ, ಕರ್ಣ, ಶಕುನಿ, ದ್ರೋಣ, ಸೈಂಧವ, ಮುಂತಾದವರು ಮೋಸದಿಂದ ಅವನ ಬಿಲ್ಲನ್ನು ಕಡಿದು ಹಾಕಿ, ಇವನನ್ನು ಕೊಂದುಬಿಟ್ಟರು. ಧರ್ಮಯುದ್ಧದಲ್ಲಿ ಎಂದಿಗಾದರೂ ಇವನು ಸೋಲುತ್ತಿರಲಿಲ್ಲ. ಇವನು ಕಲ್ಲೆದೆಯ ವೀರನು. ಪ್ರಜ್ಞಾನಿಧಿ, ಸಾಹಸಪರನು, ಸತ್ಯವಾದಿ. ಇವನ ವಿಷಯವಾಗಿ ಒಂದು ಕಥೆಯುಂಟು. ದೆಹಲಿ ಮಹಮ್ಮದೀಯ ಚಕ್ರವರ್ತಿಯೊಬ್ಬನು ಭಾರತವನ್ನೆಲ್ಲಾ ಓದಿಸಿ ಕೇಳಿ ಇದರಲ್ಲೆಲ್ಲಾ ಒಬ್ಬ ಮುದುಕನೂ ಒಬ್ಬ ಹುಡುಗನೂ ಮಾತ್ರವೇ ವೀರರತ್ನಗಳು. ಉಳಿದವರೆಲ್ಲಾ ಉಂಡಾಡಿಗಳು ಎಂದು ಹೇಳಿದನಂತೆ! ಅವರು ಯಾರು? ಹೇಳಬಲ್ಲಿರಾ? ಭೀಷ್ಮನೊಬ್ಬನು, ಅಭಿಮನ್ಯುಕುಮಾರನೊಬ್ಬನು. ಇಂತಹ ಹೆಸರುಪಡೆಯಿರಿ.

## ೪. ಯುಧಿಷ್ಠಿರನ ಧರ್ಮಾಭಿಮಾನ

ಇವನ ಒಳ್ಳೆಯ ನಡತೆಗಳಿಂದಲೇ ಇವನಿಗೆ ಧರ್ಮರಾಯನೆಂಬ ಹೆಸರು ಬಂತು. ನಿಜವಾಗಿಯೂ ಇವನು ಮೂರ್ತೀಭವಿಸಿದ ಧರ್ಮ ದೇವತೆಯೇ ಎಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಇವನು ಒಂದು ಸಂದರ್ಭ ದಲ್ಲಿ ಹೊರತು ಮತ್ತಾವಾಗಲೂ ಸುಳ್ಳಾಡಿದವನಲ್ಲ. ಅದು ನಿಜವಾದ ವಿಷಯವೇ. ಆದರೂ ಇತರರಿಗೆ ಹಾನಿಯಾಯಿತು. ಅದರ ಫಲವೇನಾ ಯಿತೆಂದು ಓದಿಯೇ ಇರುವಿರಿ. ಈತನು ಇದಕ್ಕಾಗಿ ನರಕವನ್ನು ನೋಡ ಬೇಕಾಗಿ ಬಂತು. ಶಾಂತಿ, ಸ್ಥೈರಣೆ, ಔದಾರ್ಯ, ಮುಂತಾದ ಸದ್ಗುಣಗಳು ಈತನಲ್ಲಿ ತುಂಬಿತುಳುಕುತಿದ್ದವು. ತನ್ನ ಶತ್ರುಗಳಾದ ಕೌರವರ ತಪ್ಪು ಗಳೊಂದನ್ನೂ ಗಣಿಸದೆ ಇವನು ಅವರಿಗೆ ಸಹಾಯ ಮಾಡಬೇಕೆಂತಲೇ ಹಾರೈಸುತಿದ್ದನು. ಪರಸ್ಪರ ಜಗಳವಾಡದೆ ಅವರು ಕೊಟ್ಟಷ್ಟೇ ಸಾಕೆಂದು ದುರ್ಯೋಧನನಿಗೆ ಹೇಳಿಕಳುಹಿದನು. ದ್ರೌಪದಿ, ಭೀಮ, ಅರ್ಜುನ, ಇವರು ಯುಧಿಷ್ಠಿರನ ಕ್ಷಮಾಗುಣಕ್ಕೆ ಆಗಾಗ್ಯೆ ಕೋಪಿಸಿಕೊಳ್ಳುತ್ತಿದ್ದರು. ಇವನು ಬದಲಾಗಿ ಕೋಪಿಸದೆ ಸಹನೆಯಿಂದ ಒಳ್ಳೆಯ ಮಾತನ್ನಾಡಿ ಅವರಿಗೆ ಸಮಾ ಧಾನ ಹೇಳುತ್ತಿದ್ದನು. ನಾವು ಕೂಡ ಈ ಮಹಾರಾಜನಂತೆ ಎಂತಹ ಆಪತ್ಕಾಲದಲ್ಲಿಯೂ ಧೈರ್ಯಗುಂದದೆ ಶಾಂತಚಿತ್ತರಾಗಿರಬೇಕು. ಎಷ್ಟು ಲಾಭಕರವಾಗಿದ್ದರೂ, ಸುಳ್ಳಾಡಬಾರದು. ನೀತಿ ಮಾರ್ಗವನ್ನೂ ಧರ್ಮ ವನ್ನೂ ಬಿಡದೆ ಇರಬೇಕು.

## ೫. ಶ್ರೀಕೃಷ್ಣನ ಚಾತುರ್ಯ.

ಈತನು ಶ್ರೀಮಹಾವಿಷ್ಣುವಿನ ಅವತಾರ ಸ್ವರೂಪನು. ಈ ಲೋಕ ದಲ್ಲಿ ದುಷ್ಟರನ್ನು ಶಿಕ್ಷಿಸಿ ಧರ್ಮಸಂಸ್ಥಾಪನೆ ಮಾಡಲಿಕ್ಕಾಗಿಯೇ ಈ ಮಹಾತ್ಮನು ಹುಟ್ಟಿದನು. ಮಥುರೆಯಲ್ಲಿ ದೇವಕಿಯ ಗರ್ಭದಲ್ಲಿ ಹುಟ್ಟಿದ ಇವನು ನಂದಗೋಕುಲದಲ್ಲಿ ಯಶೋದೆಯಿಂದ ಸಾಕಲ್ಪಟ್ಟನು. ಇವ ನನ್ನು ಕೊಲ್ಲಲಿಕ್ಕೆ ಬಂದ ಪೂತನೆ, ಶಕಟ, ಧೇನುಕ ಮುಂತಾದ ಹಲವು ರಾಕ್ಷಸರನ್ನು ಕೊಂದನು. ತನ್ನ ಸೋದರಮಾವನಾದ ಕಂಸನನ್ನು ಸುದಾ

ಸಂಹರಿಸಿಬಿಟ್ಟನು. ಲೌಕಿಕವ್ಯವಹಾರದಲ್ಲಿ ಇವನಂಥ ಜಾಣನು ಮತ್ತಾರೂ ಇಲ್ಲ. ಏನಾದರೂ ಕಾರ್ಯವನ್ನಾರಂಭಿಸಿದರೆ ಅದು ಪೂರೈಸುವ ತನಕ ಬಿಡುತ್ತಿರಲಿಲ್ಲ. ಮಧ್ಯದಲ್ಲಿ ಎಷ್ಟು ವಿಘಾತಗಳು ಬಂದರೂ ಹೆದರದೆ ಎದೆಗೊಟ್ಟು ನಿಂತು ಕಾರ್ಯಸಾಧನೆ ಮಾಡುತ್ತಿದ್ದನು. ಭಾರತ ಯುದ್ಧಕ್ಕೆ ತೊಡಗಿದಾಗ ಅರ್ಜುನನು ವೈರಾಗ್ಯದಿಂದ ಅಸ್ತ್ರಗಳನ್ನು ನೆಲದಲ್ಲಿಟ್ಟುಬಿಟ್ಟನು. ಆಗ ಈತನು ಅವನಿಗೆ ಭಗವದ್ಗೀತೆಯನ್ನು ಉಪದೇಶ ಮಾಡಿ ವೈರಾಗ್ಯ ಬಿಡಿಸದೆ ಇದ್ದರೆ ಭಾರತಕಥೆಗೇನೇ ಅವಕಾಶವಿರಲಿಲ್ಲ. ಇವನು ತನ್ನ ಭಕ್ತರಾಗಿ ಸಜ್ಜನರಾದ ಪಾಂಡವರಿಗೆ ಹಲವು ಕಷ್ಟಕಾಲಗಳಲ್ಲಿ ಸಹಾಯಮಾಡಿ ಕಾಪಾಡದೆ ಇದ್ದರೆ ಅವರು ನಾಶವಾಗುತ್ತಿದ್ದರು. ಆಶ್ರಿತಾಭಿಮಾನವು ಈತನಲ್ಲಿ ಚೆನ್ನಾಗಿತ್ತು. ನೀವು ಈತನಂತೆ ಕಾರ್ಯತತ್ಪರರಾಗಿ ಜಾಗರೂಕತೆಯಿಂದ ವರ್ತಿಸಿರಿ. ಲೋಕಾಪವಾದಕ್ಕೆ ಸಿಕ್ಕಬೇಡಿರಿ.

## ೬. ಕರ್ಣನ ತ್ಯಾಗ.

ಕರ್ಣನು ಕುಂತಿಯ ಮಗನೆಂದು ಮೊದಲೇ ತಿಳಿಸಿದ್ದಾರೆ. ರಾಜ್ಯಕ್ಕೆ ಅವನೇ ಹಕ್ಕುದಾರನಾಗಿ ಆಳಬಹುದಾಗಿತ್ತು. ಕೌರವ ಪಾಂಡವರ ಕಲಹಕ್ಕೆ ಕಾರಣವೇ ಇರಲಿಲ್ಲ. ಈತನು ಅರ್ಜುನನಿಗೆ ಸಮನಾದ ವೀರನು. ತನಗೆ ಎಣೆಯಾರೂ ಇಲ್ಲವೆಂಬ ದುರಭಿಮಾನದ ಜತೆಗೆ ಇತರರ ಹುಳುಕುಗಳನ್ನು ಹುಡುಕಿ ನಿಂದಿಸುವ ದುರ್ಗುಣವೊಂದು ಇವನಲ್ಲಿ ಸೇರಿತ್ತು. ಈತನು ದುರಾಲೋಚನೆ ಇಲ್ಲದೆ ದುರ್ಯೋಧನ ಮುಂತಾದವರಿಗೆ ನೀತಿ ಹೇಳಿ ಯುದ್ಧವನ್ನು ತಪ್ಪಿಸಬಹುದಾಗಿತ್ತು. ಶಕುನಿಯ ಮಾತಿಗೆ ಮರುಳಾಗಿ ಅವನ ಹಾಡಿಗೆ ತಕ್ಕಂತೆ ತಾಳಹಾಕುತ್ತಿದ್ದನು. ಅದು ಹಾಗಿರಲಿ. ಇವನಿಗೆ ದಾನ ಕರ್ಣನೆಂತಲೂ, ಸತ್ಯವಂತನೆಂತಲೂ ಹೆಸರು ಬಂದವು. ಇದಕ್ಕಾಗಿ ಇವನನ್ನು ಹೊಗಳಬೇಕು. ತನ್ನಲ್ಲಿರುವ ಯಾವ ವಸ್ತುವನ್ನಾಗಲಿ ಬೇಡಿದವರಿಗೆ ಇಲ್ಲವೆಂದು ಹೇಳದೆ ಕೊಟ್ಟುಬಿಡುತ್ತಿದ್ದನು. ತನ್ನ ಪ್ರಾಣರಕ್ಷಣೆಗಾಗಿ ಸಹಜದಿಂದ ಬಂದ ಕವಚ ಕುಂಡಲಗಳನ್ನು

ಸುದಾ ಕೊಟ್ಟರೆ ತನಗೆ ಅಪಾಯವೆಂದು ತಿಳಿದಿದ್ದರೂ ಚಿಂತಿಸದೆ ದೇವೇಂದ್ರನಿಗೆ ದಾನಮಾಡಿದನು. ಎರಡನೆಯದು, ಆಡಿದ ಮಾತು ನಡಿಸುವುದು. ತನ್ನ ತಾಯೆಂದು ತಿಳಿದ ಮೇಲೆ ಕುಂತಿಯು ಬೇಡಿದಂತೆ ಅರ್ಜುನನ ಹೊರತು ಉಳಿದ ನಾಲ್ವರು ತಮ್ಮಂದಿರ ಗೋಜಿಗೆ ಹೋಗಲಿಲ್ಲ. ತೊಟ್ಟ ಬಾಣವನ್ನು ಮರಳಿ ತೊಡುವುದಿಲ್ಲವೆಂದು ಮಾತುಕೊಟ್ಟದ್ದಂತೆ ಸರ್ಪಾಸ್ತ್ರವು ಮರಳಿ ತನ್ನನ್ನು ಪ್ರಯೋಗಿಸಿದರೆ ಅರ್ಜುನನ ತಲೆಯನ್ನು ತೆಗೆದುಬಿಡುವೆನೆಂದು ಎಷ್ಟು ಕೇಳಿಕೊಂಡರೂ ಈ ಧೀರನು ಒಪ್ಪದೆ ತನ್ನ ಪ್ರತಿಜ್ಞೆಯನ್ನು ಕಾಪಾಡಿಕೊಂಡನು. ಆಹಾ! ಇದಲ್ಲವೆ ದೃಢಮನಸ್ಸು. ಈತನ ದುರ್ಗುಣಗಳು ನಮಗೆ ಬೇಡ. ಗುಣಗಳನ್ನು ಅನುಕರಿಸಲಿಕ್ಕೆ ಪ್ರಯತ್ನಿಸೋಣ!

## ೭. ದುರ್ಯೋಧನನ ಮೂರ್ಖತ್ವ.

ಕುರುಪತಿಯಾದ ದುರ್ಯೋಧನನು ಒಳ್ಳೇ ಭೋಗಿ. ಇವನಿಗೆ ಎಲ್ಲಾ ಸಂಪತ್ತುಗಳು ಸೇರಿದ್ದುವು. ಬೇಕಾದಷ್ಟು ಐಶ್ವರ್ಯ, ರಾಜ್ಯ, ಮಕ್ಕಳು, ಒಡಹುಟ್ಟಿದವರು, ಏತರಲ್ಲಿಯೂ ಕೊರತೆಯಿರಲಿಲ್ಲ. ಪಾಂಡವರ ಪಾಲನ್ನು ಕೊಟ್ಟು ತನ್ನಷ್ಟಕ್ಕೆ ಸುಖವಾಗಿರಬಹುದಾಗಿತ್ತು. ಹಟವಾದಿಯಾದ ಇವನು ಅವರಿಗೆ ಆಕಳ ಹೆಜ್ಜೆ ಊರುವಷ್ಟು ನೆಲವನ್ನು ಸುದಾ ಕೊಡುವುದಿಲ್ಲವೆಂದು ಮುಷ್ಕರ ಹಿಡಿದನು. ಗರ್ವವೂ ಮೂರ್ಖತನವೂ ಇವನಲ್ಲಿ ತುಂಬಿ ತುಳುಕುತ್ತಿದ್ದುವು. ಹಿರಿಯರ ಸದುಪದೇಶಗಳನ್ನು ಅಲಕ್ಷ್ಯಮಾಡಿ ದುರ್ಮಂತ್ರಿಗಳ ಘಾತಿಗೆ ಕಿವಿಗೊಟ್ಟು ಕೆಟ್ಟುಹೋದನು. ಮತ್ಸ್ಯಯಂತ್ರವನ್ನು ಅರ್ಜುನನು ಭೇದಿಸಿದಾಗಲೂ ತನ್ನನ್ನು ಗಂಧರ್ವರು ಸೆರೆಹಿಡಿದುಕೊಂಡು ಹೋದಾಗಲೂ, ಉತ್ತರ ಗೋಗ್ರಹಣದಲ್ಲಿ ಎಲ್ಲರನ್ನು ಮಲಗಿಸಿಬಿಟ್ಟಾಗಲೂ ಅರ್ಜುನನ ಸಾಮರ್ಥ್ಯವನ್ನು ಕಂಡೂ ಮರಳಿ ಯುದ್ಧಕ್ಕೆ ತೊಡಗಿದ್ದರಿಂದಲೇ ಇವನಿಗೆ ಬುದ್ಧಿಯಿಲ್ಲವೆಂದು ಹೇಳಬೇಕು. ನೀವು ಇವನಂತೆಯೇ ಮೂರ್ಖರಾಗಬೇಡಿರಿ. ಹಟ ಹಿಡಿಯಬೇಡಿರಿ. ಹಿರಿಯರ ಮಾತಿಗೆ ಗೌರವ ಕೊಟ್ಟು ಅವರು ಹೇಳಿದಂತೆ ನಡೆದರೆ ಕ್ಷೇಮವುಂಟಾಗುವುದು.

## ೮. ಭೀಮನ ಸಾಮರ್ಥ್ಯ

ಭೀಮನೆಂದರೆ ಭಯವನ್ನುಂಟುಮಾಡುವನೆಂಬ ಅರ್ಥವು. ಉನ್ನತವಾಗಿಯೂ ದೃಢವಾಗಿಯೂ ಇದ್ದು ಅವನ ಆಕಾರವನ್ನು ನೋಡಿದರೆ ಎಂಥ ಕಲ್ಲೆದೆಯವನಾದರೂ ಓಡಿಹೋಗುತಿದ್ದನು. ಕ್ರೂರ ರಾಕ್ಷಸರು ಸಹಾ ಅವನ ಎದುರಿಗೆ ನಿಲ್ಲುತ್ತಿರಲಿಲ್ಲ. ಇವನು ಬಾಲ್ಯದಿಂದಲೂ ಅತ್ಯಂತ ಬಲಶಾಲಿಯಾಗಿದ್ದನು. ಎಳೆಮಗುವಾಗಿದ್ದು ಇವನನ್ನು ಎತ್ತಿಕೊಂಡು ತಾಯಿಯು ಬೆಟ್ಟವನ್ನು ಹತ್ತುತ್ತಿದ್ದಾಗ ಕಂತುಗಳಿಂದ ಜಾರಿಬೀಳಲು ಬೆಟ್ಟವೇ ಬಿರಿದು ಒಡೆದು ಹೋಯಿತಂತೆ. ಇವನಿಗೆ ಪೆಟ್ಟೇ ತಗಲಲಿಲ್ಲ. ಇವನು ದೊಡ್ಡ ದೊಡ್ಡ ಮರಗಳನ್ನು ಕೈಯಿಂದ ಉರುಳಿಸಿ ಬಿಡುತ್ತಿದ್ದನು. ಅರೆ ಬಂಡೆಗಳನ್ನು ಫೂಟ್‌ಚೆಂಡಿನಂತೆ ಎಸೆಯುತ್ತಿದ್ದನು. ಎಷ್ಟು ಭಾರವಾದರೂ ಲಕ್ಷ್ಯವಿಲ್ಲದೆ ಹೊರುತ್ತಿದ್ದನು. ವಿರಾಟನಗರದಲ್ಲಿ, ಜಟ್ಟಿಗಳನ್ನೂ, ಕೀಚಕನನ್ನೂ ಅವನ ತಮ್ಮಂದಿರನ್ನೂ ಲೀಲಾಮಾತ್ರದಿಂದ ಕೊಂದುಬಿಟ್ಟನು. ಬಕ, ಹಿಡಿಂಬ, ಮುಂತಾದ ರಾಕ್ಷಸರನ್ನೂ ಕಡಿದುಬಿಟ್ಟನು. ಈ ಯುದ್ಧದಲ್ಲಿ ಕೌರವರು ನೂರುಮಂದಿಯನ್ನೂ ಅನೇಕ ಸೈನ್ಯವನ್ನೂ ಸಂಹರಿಸಿದನು. ಬಾಲ್ಯದಿಂದ ತಕ್ಕ ಅಂಗಸಾಧನೆಯನ್ನು ಮಾಡುತ್ತಾ ದೇಹದಾರ್ಢ್ಯವನ್ನು ಕಾಪಾಡಿಕೊಂಡಿದ್ದನು. ಇವನಂತೆ ಬಲವನ್ನು ಪಡೆದರೆ ನೀವು ಬಹುಕಾಲ ಆರೋಗ್ಯದಿಂದ ಜೀವಿಸಬಹುದು.

## ೯. ವಿದುರನ ಸದಾಚರಣೆ

ಈತನು ದಾಸೀಪುತ್ರನಾದರೂ ರಾಜಮರ್‍ಯಾದೆಗೆ ತಕ್ಕಂತೆ ಇವನಿಗೆ ಅಧಿಕಾರವೂ ಪದವಿಯೂ ಲಭಿಸಿತ್ತು. ಇವನಿಗೆ ಸ್ವಲ್ಪವಾದರೂ ಅಹಂಕಾರವಿರಲಿಲ್ಲ. ಯಮನ ಅಂಶವೆನಿಸಿಕೊಂಡು ಇವನು ಧರ್ಮದಲ್ಲಿಯೇ ದೃಷ್ಟಿಯುಳ್ಳವನಾಗಿದ್ದನು. ದೂರಾಲೋಚನೆ ಇಲ್ಲದೆ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಕೌರವರ ನಡತೆಯು ಇವನಿಗೆ ಸಹಿಸುತ್ತಿರಲಿಲ್ಲ. ಅವರಿಗೆ ಎಷ್ಟು ವಿಧವಾಗಿ ಬುದ್ಧಿಹೇಳಿದರೂ ಕೇಳದೆ ಕೆಟ್ಟುಹೋದರು. ಸಜ್ಜನರಾದ ಪಾಂಡವರನ್ನು ಕಂಡರೆ ಈತನಿಗೆ ಬಹು ಪ್ರೀತಿ. ಶ್ರೀಕೃಷ್ಣನಿಗೆ

ಪರಮಭಕ್ತನಾಗಿದ್ದನು. ಆ ದೇವನು ರಾಯಭಾರಿಯಾಗಿ ಹಸ್ತಿನಾವತಿಗೆ ಹೋಗಿದ್ದಾಗ ಭೀಷ್ಮ ದ್ರೋಣಾದಿಗಳ ಮನೆಗಳಿಗೆ ಸುದಾ ಹೋಗದೆ ಈ ವಿದುರನ ಮನೆಯಲ್ಲಿ ಇಳಿದುಕೊಂಡು ಆತನು ಆದರಣೆಯಿಂದ ಕೊಟ್ಟ ಹಾಲು ಕುಡಿದು ತೃಪ್ತನಾದನು.

## ೧೦. ದ್ರೋಣನ ಗುಣಗಳು.

ಈತನು ಶಾಪಾದಪಿ ಶರಾದಪಿ ಅಂದರೆ ಬ್ರಾಹ್ಮಣ್ಯದಲ್ಲಿ ಶಾಪವನ್ನು ಕೊಡುವದಕ್ಕೂ ಕ್ಷಾತ್ರದಲ್ಲಿ ಕಾದಿ ಶತ್ರುವನ್ನು ಜಯಿಸಲಿಕ್ಕೂ ಶಕ್ತನಾದ ಗುರುವಾಗಿದ್ದನು. ಧನುರ್ವಿದ್ಯೆಯಲ್ಲಿ ಎಲ್ಲರೂ ಇವನಿಂದ ಭಿಕ್ಷೆ ಪಡೆಯು ಬೇಕು. ಇವನ ಶಕ್ತಿಯನ್ನು ಪರೀಕ್ಷಿಸಿಯೇ ಭೀಷ್ಮನು ರಾಜಕುಮಾರರ ಅಸ್ತ್ರಾಭ್ಯಾಸವನ್ನು ಮಾಡಿಸಲಿಕ್ಕೆ ಇವನನ್ನು ನಿಯಮಿಸಿದನು. ಬಾಲ್ಯ ದಲ್ಲಿ ಈತನಿಗೆ ಪಾಂಚಾಲರಾಯನು ಅರ್ಧರಾಜ್ಯ ಕೊಡುವುದಾಗಿ ವಾಗ್ದಾನಮಾಡಿಕೊಟ್ಟಿದ್ದು, ಬಡತನದಿಂದ ಈತನು ರಾಜಸ್ಥಾನಕ್ಕೆ ಹೋಗಿ ಹೇಳಿಕಳುಹಿದಾಗ ಒಳಕ್ಕೆ ಪ್ರವೇಶಿಸಲು ಅವಕಾಶ ಕೊಡದೆ ತಳ್ಳಿಸಿಬಿಟ್ಟನಂತೆ! ತನ್ನ ಶಿಷ್ಯನಾದ ಅರ್ಜುನನ ಮೂಲಕ ಅವನ ಈ ಅಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿಸಿದನು. ಈತನಿಗೆ ಪಾಂಡವರಲ್ಲಿ ಅಭಿಮಾನ ಹೆಚ್ಚಾಗಿದ್ದರೂ, ಉಪ್ಪು ತಿಂದ ಯಜಮಾನನಿಗೆ ಮೋಸಮಾಡಬಾರದೆಂಬ ಧರ್ಮವನ್ನು ಬಿಡದೆ ಸ್ವಾಮಿದ್ರೋಹಕ್ಕೆ ಮನಸ್ಸು ಕೊಡದೆ ಕೌರವನ ಪ್ರತಿ ಯುದ್ಧಗಲ್ಲಿಯೂ, ಶಕ್ತಿವಂಚನೆ ಇಲ್ಲದೆ ಕಾದುತ್ತಾ ಇದ್ದನು. ಕುರುಸೇನೆಯಲ್ಲಿ ಬೀಷ್ಮನನ್ನು ಬಿಟ್ಟರೆ ಈತನೇ ಜ್ಞಾನಿಯೂ, ಶೂರನೂ ಆಗಿದ್ದನು. ತನ್ನ ಪ್ರಿಯ ಶಿಷ್ಯನಾದ ಅರ್ಜುನನನ್ನು ಮಗನಾದ ಅಶ್ವತ್ಥಾ ಮನಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದನು. ಯುದ್ಧ ಕಾಲದಲ್ಲಿ ಅಶ್ವತ್ಥಾ ಮನು ಹತನಾದನೆಂಬ ಮಾತು ಸತ್ಯವೆಂದು ಯುಧಿಷ್ಠಿರನ ಬಾಯಿಂದ ಹೊರಟಕೂಡಲೇ ಶಸ್ತ್ರಾಸ್ತ್ರಗಳನ್ನು ಬಿಸುಟು ಪ್ರಾಣತ್ಯಾಗಮಾಡಿದನು. ನೀವು ಈತನಂತೆಯೇ ಕೀರ್ತಿಯ ಮೇಲೆ ದೃಷ್ಟಿಯಿಟ್ಟು ಸ್ವಾಮಿಭಕ್ತಿಯಿಂದ ನಡೆದುಕೊಳ್ಳಿರಿ.

## ೧೧. ಶಕುನಿಯ ಕಾಪಟ್ಯ.

ಇವನು ಧೃತರಾಷ್ಟ್ರನ ಹೆಂಡತಿಯಾದ ಗಾಂಧಾರಿಯ ಒಡಹುಟ್ಟಿದವನು. ಕಪಟದಲ್ಲಿ ಇವನನ್ನು ಬಿಟ್ಟರೆ ಮತ್ತಾರೂ ಅಗ್ರಸ್ಥಾನದಲ್ಲಿ ನಿಲ್ಲಲಾರರು. ಇವನ ದುರ್ಬೋಧನೆಯಿಂದಲೇ ದುರ್ಯೋಧನನು ಕೆಟ್ಟು ಹೋದನು. ಜೂಜಿನಲ್ಲಿ ಇವನು ಮೋಸಮಾಡಿ ಆಡುತ್ತಾ ಬಂದುದರಿಂದಲೇ ಯುಧಿಷ್ಠಿರನಿಗೆ ಒಂದು ಆಟದಲ್ಲಿಯೂ ಜಯವು ಸಿಕ್ಕದೆ ಹೋಯಿತು. ಕುರುಪತಿಯ ಹತ್ತಿರ ಇವನೂ, ಕರ್ಣನೂ, ದುಶ್ಶಾಸನನೂ, ಸೈಂಧವನೂ ಸೇರಿ ಪಾಂಡವರಿಗೆ ಕೇಡನ್ನೇ ಹಾರೈಸುತ್ತಾ ಬಂದುದರಿಂದ ಇವರಿಗೆ ದುಷ್ಟ ಚತುಷ್ಟಯವೆಂಬ ಹೆಸರು ಬಂತು. ಮೋಸವು ನಾಶಕ್ಕೆ ಹೇತುವು. ಕಪಟಗಳನ್ನು ಒಬ್ಬರೂ ನಂಬಲಾರರು. ಸರಳ ಮಾರ್ಗದಿಂದ ವರ್ತಿಸುವವನು ಯಾರಿಗೂ ಭಯಪಡಬೇಕಾಗಿಲ್ಲ. ರಾವಣನಿಗೆ ಮಾರೀಚ ಮಾವನೂ, ದುರ್ಯೋಧನನಿಗೆ ಶಕುನಿ ಮಾವನೂ ಸಹಾಯಕರಾಗಿ ಅವರ ವಂಶವನ್ನೇ ನಿರ್ಮೂಲವಮಾಡಿಬಿಟ್ಟರು.

## ೧೨. ಮಯೂರಧ್ವಜನ ಸಮಯಸ್ಫೂರ್ತಿ.

ಯುಧಿಷ್ಠಿರನು ಅಶ್ವಮೇಧಯಾಗ ಮಾಡುವಾಗ ಕೃಷ್ಣಾರ್ಜುನರು ಯಜ್ಞದ ಕುದುರೆಗೆ ಕಾವಲಾಗಿ ಹೋಗಿದ್ದರು. ಕುದುರೆಯು ಮಯೂರಧ್ವಜನ ಪಟ್ಟಣಕ್ಕೆ ಹೋಯಿತು. ಆ ರಾಯನ ಮಗ ತಾಮ್ರಧ್ವಜನು ಅದನ್ನು ಹಿಡಿದು ಕಟ್ಟಿ ಅವರೊಂದಿಗೆ ಕಾಳಗಮಾಡಿದನು. ಆ ಯುದ್ಧದಲ್ಲಿ ಅವನೇ ಗೆದ್ದು ಯಜ್ಞಾಶ್ವವನ್ನೊಯ್ದು ತಂದೆಗೆ ಒಪ್ಪಿಸಿ ನಡೆದ ಸಂಗತಿಯನ್ನು ಹೇಳಿಬಿಟ್ಟನು. ಮರುದಿನ ಬೆಳಿಗ್ಗೆ ಕೃಷ್ಣನು ಒಬ್ಬ ಮುದ್ಧಿ ಬ್ರಾಹ್ಮಣವೇಷವನ್ನು ಧರಿಸಿ, ಅರ್ಜುನನನ್ನು ತನ್ನ ಶಿಷ್ಯನಾದ ಬಾಲನಾಗಿ ಮಾಡಿಕೊಂಡು ಆ ರಾಜನ ಬಳಿಗೆ ಬಂದು ಹರಸಿದನು. ದೊರೆಯು ಅವನನ್ನು ಮನ್ನಿಸಿ ನಿನಗೆ ಏನು ಬೇಕು? ಧಾರಾಳವಾಗಿ ಕೇಳು ಎಂದನು. 'ಅಯ್ಯಾ! ನನ್ನ ಮಗನನ್ನು ಸಿಂಹವು ಹಿಡಿದುಕೊಂಡಿದೆ; ಬಿಡಲೊಲ್ಲದು. ಬೇರೆ ಮಕ್ಕಳಿಲ್ಲ. ನಿನ್ನ ಶರೀರದ ಎಡ ಭಾಗವನ್ನು ಕೊಟ್ಟರೆ, ಬಿಡುವುದಂತೆ!

ಹ್ಯಾಗೆ ಬೇಡಲಿ? ನಾಚಿಕೆ ಆಗುವುದು' ಎಂದನು. ಅದಕ್ಕವನು ಬ್ರಾಹ್ಮಣಾ ಪರೋಪಕಾರಕ್ಕೆ ಒದಗದ ಶರೀರದಿಂದ ಫಲವೇನು? ಈಗಲೇ ಕೊಯಿಸಿ ಕೊಡುವೆನು, ತೆಗೆದೊಯ್ಯುವುದೆಂದು ಹೇಳಿ ಹೆಂಡತಿ ಒಂದು ಕಡೆಯೂ, ಮಗನೊಂದುಕಡೆಯೂ ನಿಂತು ಗರಗಸದಿಂದ ತಲೆಯನ್ನು ಸೀಳಿರೆಂದು ಹೇಳಿದನು. ಅವರು ಹಾಗೆಯೇ ಮಾಡಿದರು. ಶ್ರೀಕೃಷ್ಣನಿಗೆ ಆಶ್ಚರ್ಯವಾಯಿತು. ಅವನ ಭಕ್ತಿಗೆ ಮೆಚ್ಚಿದನು. ಆಗ ಏನು ಮಾಡಬೇಕು? ಯಾವ ತಪ್ಪೂ ಇಲ್ಲ. ಅವನ ಎಡಗಣ್ಣಿನಲ್ಲಿ ಮಾತ್ರ ಒಂದೆರಡು ತೊಟ್ಟು ನೀರು ಸುರಿಯಿತು. ಅದನ್ನು ನೋಡಿ, ಛೀ! ಛೀ! ಅಳುತ್ತಾ ಕೊಡುವ ದಾನ ನನಗೇಕೆ? ನನ್ನ ಮಗನನ್ನು ಸಿಂಹವು ತಿಂದರೂ ತಿಂದುಬಿಡಲಿ! ಎಂದು ಕೋಪಿಸಿಕೊಂಡು ಹೊರಟು ಬಿಟ್ಟನು. ರಾಯನು ಅವನನ್ನು ಕರೆಸಿ, ಅಯ್ಯಾ ಕೋಪಿಸಬೇಡ, ದಾನ ಕೊಡಲಿಕ್ಕೆ ನಾನು ವ್ಯಸನಪಡಲಿಲ್ಲ. ನನ್ನ ಶರೀರದ ಎಡಭಾಗವು ಸಾರ್ಥಕವಾಯಿತು. ಬಲಭಾಗವು ವ್ಯರ್ಥವಾಯಿತಲ್ಲಾ ಎಂದು ಆ ಕಣ್ಣಿನಿಂದ ನೀರು ಸುರಿಯಿತೇ ಹೊರತು ಲೋಭದಿಂದ ಅಲ್ಲವೆಂದು ಸಮಾಧಾನ ಹೇಳಿದನು. ಶ್ರೀಕೃಷ್ಣನು ಅವನ ಮನೋದಾರ್ಢ್ಯಕ್ಕೂ ಧೈರ್ಯಗುಣಕ್ಕೂ ಸಮಯಸ್ಫೂರ್ತಿಗೂ ಮೆಚ್ಚಿಕೊಂಡು ಅವನನ್ನು ಅನುಗ್ರಹಿಸಿದನು.

## ೧೩. ಧೃತರಾಷ್ಟ್ರನ ಕ್ರೋಧ.

ಧೃತರಾಷ್ಟ್ರನು ಕಣ್ಣುಕಾಣದವನಾಗಿದ್ದರೂ, ಜ್ಞಾನದಲ್ಲಿ ಪಂಡಿತನಾಗಿಯೇ ಇದ್ದನು. ಇವನಿಗೆ ತನ್ನ ಮಕ್ಕಳ ಮೇಲೆ ಅಭಿಮಾನ ಹೆಚ್ಚಾಗಿದ್ದರೂ ಅದನ್ನು ಹೊರಪಡಿಸದೆ ತಮ್ಮನ ಮಕ್ಕಳನ್ನೂ ತನ್ನ ಮಕ್ಕಳನ್ನೂ ಸಮವಾಗಿ ನೋಡುತ್ತಾ ಪಕ್ಷಪಾತವಿಲ್ಲದವನಂತೆ ನಟಿಸುತ್ತಿದ್ದನು. ಹಿರಿಯ ಮಗನಾದ ದುರ್ಯೋಧನನು ತನ್ನ ಕಷ್ಟಗಳನ್ನು ಹೇಳಿಕೊಂಡು ಅತ್ತಾಗ ಇವನ ಮನಸ್ಸು ಕರಗಿ ನೀರಾಗುತಿತ್ತು. ಆಗ ಅವನು ಮಗನ ಮಾತಿಗೆ ಒಪ್ಪಿ ಅವನು ಕೋರಿದಂತೆ ನಡೆಸಿಕೊಡುತ್ತಿದ್ದನು. ವಿದುರನ ಹಿತವಾಕ್ಯಗಳೆಂಬ ಅಂಕುಶವಿಲ್ಲದಿದ್ದರೆ ಇವನು ಮಕ್ಕಳಿಗೆ ವಶನಾಗಿ ಮೊದಲೇ

ಕುಲಕ್ಕೆ ಕೊಡಲಿಹಾಕುತ್ತಿದ್ದನು. ಪ್ರಾಜ್ಞನಾದ ವಿದುರನು ಆಯಾ ಕಾಲಗಳಲ್ಲಿ ಅವನನ್ನು ತಿದ್ದುತ್ತಾ ಒಂದುದರಿಂದ ಕೆಲವು ಕಾಲ ಕೌರವರು ರಾಜ್ಯವಾಳಿಕೊಂಡು ಸುಖವಾಗಿದ್ದರು. ಘೋರಯುದ್ಧದಲ್ಲಿ ಮಕ್ಕಳೆಲ್ಲರೂ ಸತ್ತುಹೋದರು. ಯುದ್ಧವು ಮುಗಿದ ಮೇಲೆ ತನ್ನ ಪುತ್ರಶತಕವನ್ನೂ ಕೊಂದ ಭೀಮಸೇನನನ್ನು ನೋಡಬೇಕೆಂದು ಬಯಸಿದನು. ಶ್ರೀಕೃಷ್ಣನಿಗೆ ಇವನ ಅಭಿಪ್ರಾಯವು ತಿಳಿದಿತ್ತು. ಅದಕ್ಕಾಗಿ ಆತನು ಲೋಹದಿಂದ ಭೀಮನ ಆಕೃತಿಯಂತೆ ಒಂದು ವಿಗ್ರಹವನ್ನು ಮಾಡಿಸಿ ಇಟ್ಟನು. ಅದನ್ನು ಧೃತರಾಷ್ಟ್ರನ ಮುಂದೆ ನಿಲ್ಲಿಸಿ ಇಗೋ! ಇವನೇ ಭೀಮನೆಂದು ತೋರಿಸಿದನು. ಕುರುಡನು ಅದನ್ನು ಅಪ್ಪಿಕೊಂಡನು. ಅವನ ಕ್ರೋಧಾಗ್ನಿಯಿಂದ ಅದು ಸುಟ್ಟು ಭಸ್ಮವಾಗಿ ಹೋಯಿತು. ಆಹಾ! ಎಂತಹ ಕ್ರೋಧವೋ ನೋಡಿರಿ. ಬಳಿಕ ನಿಜವಾದ ಭೀಮನನ್ನು ತೋರಿಸಿ ಸಮಾಧಾನ ಹೇಳಿದನು. ಮನುಷ್ಯನಿಗೆ ಕ್ರೋಧವೇ ಪರಮಶತ್ರುವು. "ಕ್ರುದ್ಧಃ ಪಾಪಂ ನಕುರ್ಯಾತ್ಕಃ ಕ್ರುದ್ಧೋಹನ್ಯಾದ್ಗುರೂ ನಪಿ' ಕೋಪಿಷ್ಠನಾದ ಯಾವನು ತಾನೇ ಪಾಪಮಾಡುವುದಿಲ್ಲ? ಕೋಪಗಾರನು ತನ್ನ ಗುರುವನ್ನಾದರೂ ಕೊಂದುಬಿಡುವನು ಎಂಬ ಮಾತು ನಿಜವಾದದ್ದು.

---

## ೧೪. ಏಕಲವ್ಯನ ದೃಢಭಕ್ತಿ.

ಅಸ್ತ್ರಗುರುವಾದ ದ್ರೋಣನ ಬಳಿಗೆ ಬಿಲ್ಲುವಿದ್ಯೆ ಕಲಿಯಲು ಬಹುಮಂದಿ ಶಿಷ್ಯರು ಬಂದು ಸೇರುತ್ತಲಿದ್ದರು. ಆತನು ಬ್ರಾಹ್ಮಣ, ಕ್ಷತ್ರಿಯರಿಗೆ ಹೊರತು ಉಳಿದ ಜಾತಿಯವರಿಗೆ ಕಲಿಸುವುದಿಲ್ಲವೆಂದು ಸಂಕಲ್ಪಮಾಡಿದ್ದನು. ಒಂದು ದಿನ ಏಕಲವ್ಯನೆಂಬ ಬೇಡರವನು ಆ ಗುರುವಿನ ಬಳಿಗೆ ಬಂದು ಕೈಮುಗಿದು 'ಸ್ವಾಮಿಾ! ನಾನು ಅರಣ್ಯವಾಸಿ. ಧನುರ್ವಿದ್ಯೆಯಿಂದ ಕಾಲಕಳೆಯುತಕ್ಕವನು. ನನಗೆ ಈ ವಿದ್ಯೆ ಕಲಿಸಬೇಕೆ'ಂದು ಬೇಡಿಕೊಂಡನು. ಆಚಾರ್ಯನು 'ಎಲಾ! ನನ್ನ ಸಂಕಲ್ಪವನ್ನು ಕೇಳಿಲ್ಲವೇ? ನಿಮ್ಮಂತವರಿಗೆ ನಾನು ಬಿಲ್ಲುವಿದ್ಯೆಯನ್ನು ಅಭ್ಯಾಸಮಾಡಿಸಲೊಲ್ಲೆನೆ'ಂದು ತಿರಸ್ಕರಿಸಿ ಕಳುಹಿಸಿ

ಬಿಟ್ಟನು. ಅವನು ಚಿಂತಿಸುತ್ತಾ ಅರಣ್ಯಕ್ಕೆ ಹೋಗಿ ತನ್ನ ಗುಡಿಸಲ ಹತ್ತಿರ ಒಂದು ಗರುಡಿಯು ಮನೆಕಟ್ಟಕೊಂಡು ಅದರಲ್ಲಿ ದ್ರೋಣನಂತೆ ಮಣ್ಣಿನಿಂದ ಒಂದು ವಿಗ್ರಹವನ್ನು ಮಾಡಿ ಇಟ್ಟನು. ಅದೇ ನಿಜವಾದ ದ್ರೋಣನೆಂದು ಭಾವಿಸಿ ಭಕ್ತಿಯಿಂದ ಅದನ್ನು ಸೇವಿಸುತ್ತಾ ವಿದ್ಯೆ ಕಲಿಯುತ್ತಾ ಬಂದನು. ಅವನು ಮನೋದಾರ್ಢ್ಯದಿಂದ ಬಯಸಿದ ಹಾಗೆ ದ್ರೋಣನು ತನ್ನ ಶಿಷ್ಯರಿಗೆ ಕಲಿಸಿಕೊಡುತ್ತಿದ್ದ ವಿದ್ಯೆಗಳೆಲ್ಲವೂ ಆ ಏಕಲವ್ಯನಿಗೆ ಸುರಿಸುತ್ತಾ ಬಂದವು. ಆಚಾರ್ಯನಿಗೆ ಪ್ರಿಯ ಶಿಷ್ಯನಾದ ಅರ್ಜುನನಿಗೆ ಸರಿಗೈಯೆನಿಸಿಕೊಂಡನು. ಈ ಸುದ್ದಿ ಗುರುವಿಗೆ ತಿಳಿಯಿತು. ಆತನು ಶಿಷ್ಯರೊಂದಿಗೆ ಅಲ್ಲಿಗೆ ಬಂದು ಆತನ ವಿದ್ಯೆಯನ್ನು ಪರೀಕ್ಷಿಸಿ ಮೆಚ್ಚಿ ಆತನಲ್ಲಿ ಅನುಗ್ರಹಿಸಿ ಹೋದನು. ಹೇಗೆ ಭಾವಿಸಿದರೆ ಹಾಗೆ ಫಲ ಲಭಿಸುವುದು.

---

## ೧೫. ಕುಂತಿಯ ಶಾಂತಿ.

ಪಾಂಡುರಾಯನ ಹೆಂಡತಿಯು ಉತ್ತಮ ರಾಜಪುತ್ರಿ. ಈಕೆಗೆ ಅಸಮಾನ ಬಲರಾದ ಮೂವರು ಮಕ್ಕಳಲ್ಲದೆ ಸವತಿಯ ಮಕ್ಕಳಿಬ್ಬರನ್ನೂ ಇವಳೇ ಸಾಕಬೇಕಾಗಿ ಬಂತು. ಗಂಡನು ಸತ್ತ ಕೂಡಲೇ ಇವಳಿಗೆ ಬಲು ಕಷ್ಟ ಬಂತು. ದಿಕ್ಕು ತಪ್ಪಿದ ಮಕ್ಕಳೊಂದಿಗೆ ಹೋಗಿ ಭಾವನ ಮನೆಗೆ ಸೇರಿದಳು. ಅಲ್ಲಿ ಮಕ್ಕಳಿಗೆ ಸರಿಯಾದ ಪೋಷಣೆ ಇಲ್ಲ. ಆದರೂ ಸಹಿಸಿಕೊಂಡು ಸಾಕಿದಳು. ಪಾಂಡವರಿಗೆ ದಾಯಾದಿಗಳ ತೊಂದರೆ ಹೆಚ್ಚಾಯಿತು. ಅವರು ಅರಗಿನ ಮನೆಯಿಂದ ತಪ್ಪಿಸಿಕೊಂಡು ಹೋದಾಗ ಇವಳೂ ಸಂಗಡ ಹೋಗಿ ಮಕ್ಕಳನ್ನು ಉಪಚರಿಸುತ್ತಿದ್ದಳು. ಅವರು ವನವಾಸಕ್ಕೆ ಹೊರಟಾಗ ಮುದುಕಿಯಾಗಿದ್ದ ಈಕೆಯನ್ನು ವಿದುರನ ಮನೆಯಲ್ಲಿ ಬಿಟ್ಟುಹೋಗಿದ್ದರು. ದೀರ್ಘಕಾಲ ಮಕ್ಕಳನ್ನು ಅಗಲಿದ್ದಳು. ಯತ್ನವಿಲ್ಲ. ತನ್ನ ಮಕ್ಕಳಲ್ಲಿ ಭೀಮನನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದಳು. ತಾನು ಬಾಲ್ಯದಲ್ಲಿ ಹೆತ್ತ ಕರ್ಣನನ್ನು ಬಿಸುಟದ್ದು ತಪ್ಪೆಂದು ಕೊನೆಕೊನೆಗೆ ಇವಳಿಗೆ ಗೊತ್ತಾಯಿತು. ಕಷ್ಟಕ್ಕೆ ಎದೆಗೆಡದೆ ಶಾಂತಿಯಿಂದ ಅನುಭವಿಸಿ ಕಡೆಗೆ

ತನ್ನ ಮಕ್ಕಳು ಪ್ರಭುತ್ವಮಾಡಿದ್ದನ್ನು ಕಂಡು ಸಂತೋಷಪಟ್ಟಳು. ಇಷ್ಟು ಸ್ಥೈರಣೆಯುಳ್ಳ ಹೆಂಗಸರು ಈ ಕಾಲದಲ್ಲಿ ಸಿಕ್ಕುವುದು ಕಷ್ಟ!

---

## ೧೬. ಸುಭದ್ರೆಯ ನಿರಹಂಕಾರ.

ಇವಳು ವೀರ ಪತ್ನಿ. ಶೂರನಾದ ಅರ್ಜುನನನ್ನು ಕೈಹಿಡಿದಳು. ವೀರ ಮಾತೆ. ಬಲಿಷ್ಠನಾದ ಅಭಿಮನ್ಯುವಿನ ತಾಯಿ. ದ್ರೌಪದಿಯಂತೆ ಇವಳೂ ಮಹಾರಾಣಿಯೆನಿಸಿದ್ದರೂ ಸ್ವಲ್ಪವೂ ಅಹಂಕಾರಗೊಳ್ಳುತ್ತಿರಲಿಲ್ಲ. ತಾನು ಶ್ರೀಕೃಷ್ಣನ ತಂಗಿ ಎಂಬ ದುರಭಿಮಾನವೂ ಇವಳಿಗೆ ಇರಲಿಲ್ಲ. ಬಲರಾಮನ ಮಗಳಾದ ಕನಕಾಂಗಿಯನ್ನು ಕೌರವನ ಮಗ ಲಕ್ಷ್ಮಣನಿಗೆ ಕೊಡುವುದಾಗಿ ಕೇಳಿ ತನ್ನ ಬಡತನಕ್ಕೆ ಬಹು ನೊಂದುಕೊಂಡರೂ ಪರರನ್ನು ದೂರಲಿಲ್ಲ. ಶ್ರೀಕೃಷ್ಣನ ಅನುಗ್ರಹದಿಂದ ಆ ಹುಡುಗಿಯು ಅಭಿಮನ್ಯುವಿಗೇನೇ ಹೆಂಡತಿಯಾದಳು. ಸ್ತ್ರೀಜನಕ್ಕೆ ಸಹಜವಾದ ಗರ್ವವೆಂಬ ದುರ್ಗುಣಕ್ಕೆ ಇವಳು ಸಿಕ್ಕದೆ ದೂರವಾಗಿದ್ದಳು!

## ೧೭. ಯಾದವರ ಮದ್ಯಪಾನದ ಫಲ.

ದ್ವಾರಕೆಯಲ್ಲಿ ಶ್ರೀಕೃಷ್ಣನ ನೆಂಟರಾದ ಯಾದವರು ಬಹು ಮಂದಿ ಇದ್ದರು. ಇವರು ಮದ್ಯಪಾನಮಾಡುತ್ತಾ ಕೆಲಸವಿಲ್ಲದೆ ಅಡಿಗಡಿಗೆ ಒಬ್ಬರಿಗೊಬ್ಬರು ಕಾದಾಡಿಕೊಂಡು ಕೃಷ್ಣನ ಮನಸ್ಸಿಗೆ ಬಹು ಬೇಸರ ಉಂಟುಮಾಡುತ್ತಿದ್ದರು. ಯಾರಾದರೂ ಮಹಾತ್ಮರು ಬಂದರೆ ಅವರನ್ನು ಅಣಕಿಸಿ ಹಾಸ್ಯಮಾಡುತ್ತಿದ್ದರು. ಒಂದು ದಿನ ಒಬ್ಬ ಮಹಾಮುನಿ ಅಲ್ಲಿಗೆ ಬಂದನು. ಅವರು ಸಾಂಬನೆಂಬುವನಿಗೆ ಹೆಣ್ಣು ವೇಷಹಾಕಿ, ಆತನನ್ನು ಕುರಿತು ಸ್ವಾಮಿಾ! ಈಕೆಯು ಬಸುರಾಗಿರುವಳು. ಇವಳು ಯಾವ ಮಗುವನ್ನು ಹೆರುವಳು? ಹೇಳೆಂದು ಕೇಳಿದರು. ಅದಕ್ಕಾತನು ಅವರ ಕೃತ್ರಿಮವನ್ನು ಕಂಡುಹಿಡಿದು ಕೋಪದಿಂದ ನಿಮ್ಮ ವಂಶವನ್ನು ನಿರ್ಮೂಲಮಾಡುವ ಒನಕೆಯನ್ನು ಹೆರುವಳು ಎಂದು ಹೇಳಿ ಹೊರಟುಹೋದನು. ಆ ಮುನಿಯು

ಶಾಪದಂತ ಅವರು ಒಂದು ಒನಕೆಯನ್ನು ಹಡೆದನು. ಅವರು ಶ್ರೀಕೃಷ್ಣನಿಗೆ ಅದನ್ನು ತೋರಿಸಿ ನಡೆದ ಸುದ್ದಿ ಹೇಳಿದರು. ಆತನು ಅವರನ್ನು ಗದರಿಸಿ ಶಾಪದ ಫಲವನ್ನು ಅನುಭವಿಸಿರೆಂದು ಹೇಳಿಬಿಟ್ಟನು. ಅದರಂತೆ ಅವ ರೆಲ್ಲರೂ ಹೆಚ್ಚು ಹೆಚ್ಚಾಗಿ ಕುಡಿದು ಕಲಹಿಸಿ ಮಡಿದುಹೋದರು.

---

## ೧೮. ದ್ರೌಪದಿಯ ಪಾತಿವ್ರತ್ಯ.

ಪಾಂಚಾಲರಾಯನ ಮಗಳಾದ ಈ ದ್ರೌಪದಿಯೇ ಭಾರತದ ಕಥಾ ನಾಯಕಿ. ಈಕೆಯು ಉತ್ತಮ ಪತಿವ್ರತೆ. ಕಾರ್ಯನಿರ್ವಾಹದಲ್ಲಿ ಬಹು ಸಮರ್ಥೆ; ಪ್ರಜ್ಞಾನಿಧಿ. ಇವಳಂತೆ ಹಲವು ಕಷ್ಟಗಳಿಗೆ ಸಿಕ್ಕಿದ ಹೆಂಗಸರು ಅಪರೂಪ. ಆದರೂ ಅವುಗಳನ್ನೆಲ್ಲಾ ಸೈರಿಸಿಕೊಂಡು ಪತಿಗಳ ಮಾತಿಗೆ ಎದುರಾಡದೆ ಸ್ಥಿರಚಿತ್ತಳಾಗಿ ಕಾರ್ಯಸಾಧನೆಮಾಡಿದಳು. ಭಗವಂತನಲ್ಲಿ ಈಕೆಗೆ ದೃಢವಾದ ಭಕ್ತಿ ಇದ್ದುದರಿಂದ ಇವಳು ನೆನೆದಾಗಲೆಲ್ಲಾ ಸ್ವಾಮಿಯು ಬೆಂಬಲನಾಗಿ ಬಂದು ಈಕೆಯ ಕಷ್ಟಗಳನ್ನು ಪರಿಹರಿಸುತ್ತಿದ್ದನು. ಕುರು ಸಭೆಯಲ್ಲಿ ಆದ ಮಾನಭಂಗ, ಸೈಂಧವನ ಕೈಗೆ ಸಿಕ್ಕಿದ್ದೂ, ದುಷ್ಟನಾದ ಕೀಚಕನಿಂದ ಒದೆಯಿಸಿಕೊಂಡಿದ್ದೂ, ಒಂದೇ ರಾತ್ರಿಯಲ್ಲಿ ತನ್ನ ಐವರು ಮಕ್ಕಳನ್ನು ಗುರುಪುತ್ರನು ಕಡಿದುಹಾಕಿದ್ದೂ, ಇಂತಹ ಮಹತ್ಕಷ್ಟಗಳನ್ನು ಸಹಿಸಬಲ್ಲವರು ಯಾರು? ಗುಣವಂತೆಯಾದ ಈ ಸಾಧ್ವೀಮಣಿಯು ಹೆಸ ರನ್ನು ನೆನೆಹರೆ ಮಾಡಿದ ಪಾಪವೆಲ್ಲವೂ ಪರಿಹಾರವಾಗುವುದೆಂದು ಹೇಳುವರು.

**ಓಂ ತತ್ಸತ್**

ಸಂಪೂರ್ಣಂ